KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ನವೆಂಬರ್ ೨೩, ೨೦೦೬ (ಮಾರ್ಗಶಿರ ೨, ಶಕ ವರ್ಷ ೧೯೨೮) | ಸಂಚಿಕೆ ೪೬ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

**ವಿಷಯ :** ದಿನಾಂಕ 21.7.2005ರ ಆದೇಶ ಸಂಖ್ಯೆ ಸಂವ್ಯಶಾಇ 38 ಆಡಳಿತ 2004ರಲ್ಲಿ ಪ್ರಾಂತೀಯ ಅಧಿನಿಯಮಗಳ ಕ್ರೋಢೀಕರಣ, ನಿರಸನ, ತಿದ್ದುಪಡಿಗಾಗಿ ಸೃಜಿಸಲಾದ ಶ್ರೀ ಕೆ.ಆರ್. ಚಾಮಯ್ಯ, ಏಕ ಸದಸ್ಯ ಸಮಿತಿಯನ್ನು ದಿನಾಂಕ 7.12.2006 ರಿಂದ ಮತ್ತೊಂದು ವರ್ಷಕ್ಕೆ ಮುಂದುವರಿಸುವ ಬಗ್ಗೆ.

**ಓದಲಾಗಿದೆ :**

1) ಕರ್ನಾಟಕ ವಿಧಾನ ಪರಿಷತ್ತಿನ ದಿನಾಂಕ 28.3.2006ರ ನಡವಳಿ.
2) ಸರ್ಕಾರಿ ಆದೇಶ ಸಂಖ್ಯೆ ಸಂವ್ಯಶಾಇ 38 ಆಡಳಿತ 2004, ದಿನಾಂಕ 21.7.2005.
3) ಏಕ ಸದಸ್ಯ ಸಮಿತಿಯ ಕಡತ ಸಂಖ್ಯೆ OMC/IR-11/41-42
4) ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 827 ವೆಚ್ಚ 7/2006, ದಿನಾಂಕ 25.9.2006.
5) ಮಾನ್ಯ ಮುಖ್ಯಮಂತ್ರಿಗಳ ಕಛೇರಿ ಟಿಪ್ಪಣಿ ಸಂಖ್ಯೆ PSCM 7863/2006, ದಿನಾಂಕ 19.10.2006.

**ಪ್ರಸ್ತಾವನೆ :**

ಮೇಲೆ ಓದಲಾದ (1) ರಲ್ಲಿನ ದಿನಾಂಕ: 28.3.2002ರ ಕರ್ನಾಟಕ ವಿಧಾನ ಪರಿಷತ್ತಿನ ನಡವಳಿಯ ರೀತ್ಯ ದಿನಾಂಕ: 1.11.1956ರಲ್ಲಿ ಹಿಂದಿನ ಅವಧಿಯಲ್ಲಿ ಹಾಗೂ ಈಗಲೂ ಚಾಲ್ತಿಯಲ್ಲಿರುವ ಪ್ರಾಂತೀಯ ಅಧಿನಿಯಮಗಳು ಅಂದರೆ ಬೊಂಬಾಯಿ, ಹೈದರಾಬಾದ್, ಮದ್ರಾಸ್, ಕೊಡಗು, ಹಳೇ ಮೈಸೂರು, ಪ್ರದೇಶಗಳಲ್ಲಿನ ಅಧಿನಿಯಮಗಳ ಬಗ್ಗೆ ಅಧ್ಯಯನ ನಡೆಸಿ ಕ್ರೋಢೀಕರಣ, ನಿರಸನ, ತಿದ್ದುಪಡಿಗಾಗಿ ಏಕ ಸದಸ್ಯ ಸಮಿತಿಯನ್ನು ರಚಿಸಲು ತೀರ್ಮಾನಿಸಲಾಯಿತು.

ಮೇಲೆ ಓದಲಾದ (2)ರಲ್ಲಿನ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಸರ್ಕಾರದ ನಿವೃತ್ತ ಕಾನೂನು ಕಾರ್ಯದರ್ಶಿಗಳು ಹಾಗೂ ಕರ್ನಾಟಕ ಆಡಳಿತ ನ್ಯಾಯಮಂಡಳಿಯ ನಿವೃತ್ತ ಉಪಾಧ್ಯಕ್ಷರು ಆದ ಶ್ರೀ ಕೆ.ಆರ್. ಚಾಮಯ್ಯ ರವರ ನೇತೃತ್ವದಲ್ಲಿ ಸಿಬ್ಬಂದಿ ಸಮೇತ ಏಕ ಸದಸ್ಯ ಸಮಿತಿಯನ್ನು ರಚಿಸಲಾಯಿತು. ಏಕ ಸದಸ್ಯ ಸಮಿತಿಯ ಅಧ್ಯಕ್ಷರು ಕಾರ್ಯವರದಿ ಮಾಡಿಕೊಂಡ ನಂತರದಿಂದ ಒಂದು ವರ್ಷದ ಮಟ್ಟಿಗೆ ಕಾಲಾವಧಿಯನ್ನು ನಿಗದಿಪಡಿಸಲಾಗಿತ್ತು. ಬೆಂಗಳೂರಿನ ವಿಶ್ವೇಶ್ವರಯ್ಯ ಮುಖ್ಯಗೋಪುರದ 11ನೇ ಮಹಡಿಯಲ್ಲಿ ಸದರಿ ಏಕ ಸದಸ್ಯ ಸಮಿತಿಗೆ ಸ್ಥಳಾವಕಾಶ ಕಲ್ಪಿಸಿದ ನಂತರ ಶ್ರೀ ಕೆ.ಆರ್. ಚಾಮಯ್ಯರವರು ದಿನಾಂಕ: 7.12.2005ರಂದು ಈ ಸಮಿತಿಯ ಕೆಲಸ ಕಾರ್ಯಗಳ ನಿರ್ವಹಣೆಗೆ ವರದಿ ಮಾಡಿಕೊಂಡಿರುತ್ತಾರೆ. ಆದುದರಿಂದ ಈ ಸಮಿತಿಯ ಕಾರ್ಯಾವಧಿಯು ದಿನಾಂಕ: 7.12.2005 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಮಟ್ಟಿಗೆ ಆಗಿರುತ್ತದೆ.

ಸದರಿ ಏಕ ಸದಸ್ಯ ಸಮಿತಿಯು ಈಗಾಗಲೇ ಕೊಡಗು, ಹಳೇ ಮೈಸೂರು ಪ್ರಾಂತ್ಯದ ಅಧಿನಿಯಮಗಳ ಬಗ್ಗೆ ಅಧ್ಯಯನ ನಡೆಸಿ ಎರಡು ಮಧ್ಯಂತರ ವರದಿಗಳನ್ನು ಸಲ್ಲಿಸಿರುತ್ತದೆ.

ಮೇಲೆ ಓದಲಾದ (3)ರಲ್ಲಿನ ಏಕಸದಸ್ಯ ಸಮಿತಿಯ ಕಡತದಲ್ಲಿ, ಸದರಿ ಸಮಿತಿಯು ವಾಸ್ತವವಾಗಿ ಏಪ್ರಿಲ್ 2006 ರಿಂದ ಆರ್ಥಿಕ ಆಯ-ವ್ಯಯ ಅನುದಾನ, ಕಂಪ್ಯೂಟರ್ ಸಲಕರಣೆಗಳನ್ನು ಮತ್ತು ಸಿಬ್ಬಂದಿಯನ್ನು ಪಡೆದು ಏಪ್ರಿಲ್ 2006 ರಿಂದ ಕೆಲಸ ಕಾರ್ಯಗಳನ್ನು **ನಿರ್ವಹಿಸಲಾಗಿದೆ. ಕೊಡಗು ಮತ್ತು ಮೈಸೂರು ಪ್ರಾಂತ್ಯಗಳಿಗೆ ಸಂಬಂಧಿಸಿದ ಎರಡು ಮಧ್ಯಕಾಲೀನ ವರದಿಗಳನ್ನು ಸಲ್ಲಿಸಿರುತ್ತದೆ. ಹೈದರಾಬಾದ್ ಅಧಿನಿಯಮಗಳ ಬಗ್ಗೆ ಅಧ್ಯಯನ ನಡೆಸುತ್ತಿದ್ದು ಅದರ ವರದಿಯನ್ನು ಅತಿ ಶೀಘ್ರವಾಗಿ ಸಲ್ಲಿಸುವುದಾಗಿ ತಿಳಿಸಿ, ಇನ್ನುಳಿದ ಮದ್ರಾಸ್ ಮತ್ತು ಬಾಂಬೆ ಪ್ರಾಂತ್ಯಗಳ ಅಧಿನಿಯಮಗಳ ಬಗ್ಗೆ ಅಧ್ಯಯನ ನಡೆಸಿ ಅವುಗಳ ಉಪಯೋಗತೆ ಮತ್ತು ನಿರುಪಯೋಗತೆ ಬಗ್ಗೆ ವರದಿ ಸಲ್ಲಿಸಲು ಕಾಲಾವಕಾಶ**

ಬೇಕಾಗುತ್ತದೆ ಎಂದು ಕೋರಲಾಗಿದೆ. ದಿನಾಂಕ: 7.12.2006 ರಿಂದ ಇನ್ನು ಒಂದು ವರ್ಷಗಳ ಕಾಲ ಏಕ ಸದಸ್ಯ ಸಮಿತಿಯ ಕಾರ್ಯಾವಧಿಯನ್ನು ವಿಸ್ತರಿಸುವಂತೆ ಮಾನ್ಯ ಗೃಹ, ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವರನ್ನು ಕೋರಲಾಗಿದೆ. ಈ ಪ್ರಸ್ತಾವನೆಯನ್ನು ಮಾನ್ಯ ಗೃಹ, ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವರು ಅನುಮೋದಿಸಿರುತ್ತಾರೆ.

ಮೇಲೆ ಓದಲಾದ (4)ರಲ್ಲಿನ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯ ಈ ಪ್ರಸ್ತಾವನೆಯನ್ನು ಅನುಮೋದಿಸಿರುತ್ತದೆ.

ಮೇಲೆ ಓದಲಾದ (5)ರಲ್ಲಿನ ಟಿಪ್ಪಣಿಯಲ್ಲಿ ಮಾನ್ಯ ಮುಖ್ಯಮಂತ್ರಿಗಳು ಸಹ ಈ ಪ್ರಸ್ತಾವನೆಯನ್ನು ಅನುಮೋದಿಸಿರುತ್ತಾರೆ.

ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಸಂವ್ಯಶಾಇ 121 ಆಡಳಿತ 2006, ಬೆಂಗಳೂರು, ದಿನಾಂಕ: 28ನೇ ಅಕ್ಟೋಬರ್ 2006**

ದಿನಾಂಕ: 21.7.2005ರ ಸರ್ಕಾರಿ ಆದೇಶ ಸಂಖ್ಯೆ: ಸಂವ್ಯಶಾಇ 38 ಆಡಳಿತ 2004ರಲ್ಲಿ ರಚಿತವಾಗಿರುವ ಶ್ರೀ ಕೆ.ಆರ್. ಚಾಮಯ್ಯ ಏಕ ಸದಸ್ಯ ಸಮಿತಿಯನ್ನು ದಿನಾಂಕ: 7.12.2006 ರಿಂದ ಜಾರಿಗೆ ಬರುವಂತೆ ಇನ್ನು ಒಂದು ವರ್ಷದ ಕಾಲಾವಧಿಗೆ (ಅಂದರೆ ದಿನಾಂಕ: 7.12.2007ರವರೆಗೆ) ವಿಸ್ತರಿಸಿ ಆದೇಶಿಸಲಾಗಿದೆ.

ಸದರಿ ಸಮಿತಿಗೆ ಮಂಜೂರು ಮಾಡಿರುವ ಪೂರಕ ಸಿಬ್ಬಂದಿಯನ್ನು, ವಾಹನ ಮತ್ತು ದೂರವಾಣಿ ಸೌಲಭ್ಯಗಳು ಹಾಗೂ ಏಕ ಸದಸ್ಯ ಸಮಿತಿಯ ಸದಸ್ಯರಾದ ಶ್ರೀ ಕೆ.ಆರ್. ಚಾಮಯ್ಯರವರ ಸೇವಾ ಷರತ್ತುಗಳು ಹಾಗೂ ಇತರೆ ಸೌಲಭ್ಯಗಳೊಂದಿಗೆ ಮೇಲೆ ಹೇಳಲಾದ ಅವಧಿಗೆ ಏಕ ಸದಸ್ಯ ಸಮಿತಿಯು ಮುಂದುವರಿಯುವಂತೆ ಆದೇಶಿಸಲಾಗಿದೆ.

ಈ ಸಮಿತಿಯ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2052-00-090-0-20-ಶ್ರೀ ಕೆ.ಆರ್. ಚಾಮಯ್ಯ, ಏಕಸದಸ್ಯ ಸಮಿತಿ ಅಡಿಯಲ್ಲಿ ಭರಿಸಬಹುದಾಗಿದೆ.

ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 827 ವೆಚ್ಚ 7/06, ದಿನಾಂಕ: 25.9.06 ರಲ್ಲಿನ ಆರ್ಥಿಕ ಇಲಾಖೆಯ ಸಹಮತಿಯೊಂದಿಗೆ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ದ್ವಾರಕನಾಥ್ ಬಾಬು**

ಪಿ.ಆರ್. 1538

ಜಂಟಿ ಪ್ರಾರೂಪಕಾರ ಮತ್ತು ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಜಿಲ್ಲಾ ಮತ್ತು ಸತ್ರ ನ್ಯಾಯಾಲಯಗಳ್ಲಲಿನ ಹುದ್ದೆಗನ್ನು ಖಾಯಂಗೊಳಿಸುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರಿ ಆದೇಶ ಸಂಖ್ಯೆ ಲಾ 18 ಎಲ್‌ಸಿಇ 1997 ದಿನಾಂಕ 2.12.1999
2) ಸರ್ಕಾರಿ ಆದೇಶ ಸಂಖ್ಯೆ ಲಾ 18 ಎಲ್‌ಸಿಇ 1997 (ಭಾಗ) ದಿನಾಂಕ 19.4.2000
3) ಸರ್ಕಾರಿ ಆದೇಶ ಸಂಖ್ಯೆ ಲಾ 74 ಎಲ್‌ಸಿಇ 2001 ದಿನಾಂಕ 7.9.2001
4) ಸರ್ಕಾರಿ ಆದೇಶ ಸಂಖ್ಯೆ ಲಾ 30 ಎಲ್‌ಸಿಇ 2000(ಭಾಗ) ದಿನಾಂಕ 24.11.2001
5) ಸರ್ಕಾರಿ ಆದೇಶ ಸಂಖ್ಯೆ ಲಾ 07 ಎಲ್‌ಸಿಇ 2002 ದಿನಾಂಕ 21.8.2004.

**ಪ್ರಸ್ತಾವನೆ :**

ಹಾವೇರಿ ಮತ್ತು ಬಾಗಲಕೋಟೆ ಇಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯಗಳನ್ನು ಸ್ಥಾಪಿಸಲು ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಮಂಜೂರಾತಿ ನೀಡಲಾಗಿತ್ತು. ಅದೇ ರೀತಿ ಕೊಪ್ಪಳ, ಉಡುಪಿ ಮತ್ತು ಚಾಮರಾಜನಗರ ಇಲ್ಲಿ ಅಂತಹ ನ್ಯಾಯಾಲಯಗಳನ್ನು ಸಾಪಿಸಲು ಕ್ರಮವಾಗಿ ಮೇಲೆ (2), (4) ಮತ್ತು (5)ರಲ್ಲಿ ಓದಲಾದ ಆದೇಶದಲ್ಲಿ ಮಂಜೂರಾತಿ ನೀಡಲಾಗಿತ್ತು. ಈ ಮಧ್ಯೆ ಹಾವೇರಿಯ ಜಿಲ್ಲಾ ಮತ್ತು ಸತ್ರ ನ್ಯಾಯಾಲಯಕ್ಕೆ ಮೇಲೆ (3) ರಲ್ಲಿ ಓದಲಾದ ಆದೇಶದಲ್ಲಿ ಇನ್ನೂ 07 ಹುದ್ದೆಗಳನ್ನು ಸೃಜಿಸಲು ಮಂಜೂರಾತಿ ನೀಡಲಾಗಿತ್ತು.

ಈ ನ್ಯಾಯಾಲಯಗಳಲ್ಲಿನ ವಿವಿಧ ವೃಂದದ ಹುದ್ದೆಗಳನ್ನು ಕಾಲಕಾಲಕ್ಕೆ ಮುಂದುವರೆಸಲಾಗಿದ್ದು ಅವುಗಳನ್ನು ಖಾಯಂಗೊಳಿಸುವಂತೆ ಉಚ್ಚ ನ್ಯಾಯಾಲಯವು ಪ್ರತ್ಯೇಕವಾದ ಪ್ರಸ್ತಾವನೆಗಳನ್ನು ಸಲ್ಲಿಸಿತ್ತು. ನಂತರ ಇದನ್ನು ದಿನಾಂಕ: 2.5.2006 ಹಾಗೂ 17.8.2006 ರಂದು ನಡೆದ ಉನ್ನತ ಮಟ್ಟದ ಮೇಲ್ವಿಚಾರಣಾ ಸಮಿತಿ ಸಭೆಗಳಲ್ಲಿ ಚರ್ಚಿಸಲಾಗಿದೆ.

ಆ ಹಿನ್ನೆಲೆಯಲ್ಲಿ ಪರಿಶೀಲಿಸಿ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 104 ಎಲ್‌ಎಸಿ 2006, ಬೆಂಗಳೂರು, ದಿನಾಂಕ: 12ನೇ ಅಕ್ಟೋಬರ್ 2006**

ಹಾವೇರಿ, ಬಾಗಲಕೋಟೆ, ಕೊಪ್ಪಳ, ಉಡುಪಿ ಮತ್ತು ಚಾಮರಾಜನಗರ ಇಲ್ಲಿನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯಗಳಲ್ಲಿ ಇದಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ನಮೂದಿಸಿರುವ ವಿವಿಧ ವೃಂದದ ಹುದ್ದೆಗಳನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಖಾಯಂಗೊಳಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಇದಕ್ಕೆ ಆರ್ಥಿಕ ಇಲಾಖೆಯ ಸಹಮತಿಯನ್ನು ಟಿಪ್ಪಣಿ ಸಂಖ್ಯೆ ಆಇ 798 ವೆಚ್ಚ-7/06 ದಿನಾಂಕ: 27.9.2006 ರಲ್ಲಿ ಪಡೆಯಲಾಗಿದೆ.

**ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,**

**ಗಂಗನರಸಯ್ಯ**

**ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-1),**
**ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.**

**ಅನುಬಂಧ**

**ಸರ್ಕಾರಿ ಆದೇಶ ಸಂಖ್ಯೆ ಲಾ 104 ಎಲ್ಎಸಿ 2006, ದಿನಾಂಕ: 12.10.2006**

| ಕ್ರ. ಸಂ. | ಹುದ್ದೆಯ ಪದನಾಮ | ಜಿಲ್ಲಾ ಮತ್ತು ಸತ್ರ ನ್ಯಾಯಾಲಯ | | | | |
|---|---|---|---|---|---|---|
| | | ಬಾಗಲಕೋಟೆ | ಕೊಪ್ಪಳ | ಚಾಮರಾಜನಗರ | ಹಾವೇರಿ | ಉಡುಪಿ |
| | | ಹುದ್ದೆಗಳ ಸಂಖ್ಯೆ | | | | |
| 1. | ಜಿಲ್ಲಾ ನ್ಯಾಯಾಧೀಶರು | 01 | 01 | 01 | 01 | 01 |
| 2. | ಮುಖ್ಯ ಆಡಳಿತಾಧಿಕಾರಿ | 01 | 01 | 01 | 01 | 01 |
| 3. | ಶಿರಸ್ತೇದಾರರು | 03 | 03 | 03 | 03 | 03 |
| 4. | ತೀರ್ಪು ಬರಹಗಾರರು | 01 | 01 | 01 | 02 | 01 |
| 5. | ಪ್ರಥಮ ದರ್ಜೆ ಸಹಾಯಕರು | 05 | 05 | 05 | 06 | 06 |
| 6. | ದ್ವಿತೀಯ ದರ್ಜೆ ಸಹಾಯಕರು | 08 | 08 | 08 | 08 | 09 |
| 7. | ಬೆರಳಚ್ಚುಗಾರ, ಬೆರಳಚ್ಚುಗಾರ-ಕಮ್-ನಕಲುಗಾರರು | 09 | 09 | 09 | 10 | 10 |
| 8. | ಬೇಲೀಫ್ಸ್ | 02 | 02 | 02 | 03 | 05 |
| 9. | ಪ್ರೋಸಸ್ ಸರ್ವರ್ಸ್ | 02 | 02 | 02 | 02 | 12 |
| 10. | ಅಟೆಂಡರ್ಸ್ | 02 | 02 | 02 | 03 | 03 |
| 11. | ವಾಹನ ಚಾಲಕರು | 01 | 01 | 01 | 01 | 01 |
| 12. | ಪ್ಯೂನ್ಸ್ | 03 | 03 | 03 | 05 | 05 |
| | **ಒಟ್ಟು** | **38** | **38** | **38** | **45** | **57** |

**ಗಂಗನರಸಯ್ಯ**

ಪಿ.ಆರ್. 1540

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-1),
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

## ಲೋಕೋಪಯೋಗಿ ಸಚಿವಾಲಯ

**ವಿಷಯ :** ದಾವಣಗೆರೆ ಜಿಲ್ಲೆ ಹರಿಹರ ತಾಲ್ಲೂಕಿನ ಎಕ್ಕೆಗೊಂದಿ-ನಂದಿಗುಡಿ ರಸ್ತೆಯಿಂದ ನಂದಿಗುಡಿ ಹೊಸ ಶ್ರೀಮಠದವರೆಗಿನ ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ : ಸಂಕದ : ರಶಾ : ಸಿಂ-3: ಮೇಲ್ದರ್ಜೆ : 2006-07, ದಿನಾಂಕ:18.8.2006.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಮುಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರು ದಾವಣಗೆರೆ ಜಿಲ್ಲೆ ಹರಿಹರ ತಾಲ್ಲೂಕಿನ ಎಕ್ಕೆಗೊಂದಿ-ನಂದಿಗುಡಿ ರಸ್ತೆಯಿಂದ ನಂದಿಗುಡಿ ಹೊಸ ಶ್ರೀಮಠದವರೆಗಿನ ಗ್ರಾಮೀಣ ರಸ್ತೆಯನ್ನು (3.20 ಕಿ.ಮೀ) ಜಿಲ್ಲಾ ಮುಖ್ಯರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಲೋಇ 235 ಸಿಆರ್ಎಂ 2005, ಬೆಂಗಳೂರು, ದಿನಾಂಕ: 21ನೇ ಅಕ್ಟೋಬರ್ 2006**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ, ದಾವಣಗೆರೆ ಜಿಲ್ಲೆ ಹರಿಹರ ತಾಲ್ಲೂಕಿನ ಎಕ್ಕೆಗೊಂದಿ-ನಂದಿಗುಡಿ ರಸ್ತೆಯಿಂದ ನಂದಿಗುಡಿ ಹೊಸ ಶ್ರೀಮಠದವರೆಗಿನ 3.20 ಕಿ.ಮೀ ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯರಸ್ತೆಯನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜಿ. ನಾರಾಯಣ**

ಪಿ.ಆರ್. 1547

ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ ಇಲಾಖೆ (ಸಂಪರ್ಕ)

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ :** 2006-07ನೇ ಸಾಲಿನ ಆಯವ್ಯಯದಲ್ಲಿ ಘೋಷಿಸಿದಂತೆ ಡಾ: ಬಿ.ಆರ್. ಅಂಬೇಡ್ಕರ್ ಮತ್ತು ಶ್ರೀ ಬಾಬು ಜಗಜೀನರಾಂರವರ ಸಮಗ್ರ ಗ್ರಾಮೀಣಾಭಿವೃದ್ಧಿ ಯೋಜನೆಯನ್ನು ಅನುಷ್ಠಾನಗೊಳಿಸುವ ಬಗ್ಗೆ.

**ಓದಲಾಗಿದೆ :**
1) 2006-07ನೇ ಸಾಲಿನ ಆಯವ್ಯಯದಲ್ಲಿ ಘೋಷಿಸಿದಂತೆ.
2) ಸರ್ಕಾರದ ದೇಶ ಸಂ:ಸಕಇ 44 ಎಸ್ಎಲ್ಪಿ 2006, ದಿ:22.5.2006.

**ಪ್ರಸ್ತಾವನೆ :**

2006-07ನೇ ಸಾಲಿನ ಆಯವ್ಯಯದಲ್ಲಿ ಘೋಷಿಸಿದಂತೆ ಗ್ರಾಮಾಂತರ ಪ್ರದೇಶದ ಅಭಿವೃದ್ಧಿಯಲ್ಲಿ ಹಿಂದುಳಿದಿರುವ ಹಾಗೂ ರಾಜ್ಯದಲ್ಲಿ **ಹೆಚ್ಚಿನ ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗ ಮತ್ತು ಹಿಂದುಳಿದ ವರ್ಗದ ಜನಸಂಖ್ಯೆ ಹೊಂದಿರುವ ಎರಡು ಗ್ರಾಮಗಳನ್ನು ಆಯ್ಕೆ ಮಾಡಿ, ಈ ಗ್ರಾಮಗಳಲ್ಲಿ ಒಂದಕ್ಕೆ ಡಾ:ಬಿ.ಆರ್. ಅಂಬೇಡ್ಕರ್ ಗ್ರಾಮ ಮತ್ತು ಇನ್ನೊಂದಕ್ಕೆ ಶ್ರೀ ಬಾಬು ಜಗಜೀವನರಾಂ ಗ್ರಾಮವೆಂದು ಹೆಸರಿಸಿ, ಈ ಎರಡು ಗ್ರಾಮಗಳ ಸರ್ವತೋಮುಖ ಅಭಿವೃದ್ಧಿಪಡಿಸಲು ಉದ್ದೇಶಿಸಲಾಗಿದೆ. ಈ ಉದ್ದೇಶವನ್ನು ಈಡೇರಿಸಲು ಆರೋಗ್ಯ, ಶಿಕ್ಷಣ, ಬಡತನ ನಿರ್ಮೂಲನೆಯಿಂದ**

ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗಗಳ ಮಾನವ ಅಭಿವೃದ್ಧಿ ಅಂಶಗಳ ಸುಧಾರಣೆಗೆ ಒತ್ತು ನೀಡುವುದು ಹಾಗೂ ಜನಾಂಗಕ್ಕೆ ರಸ್ತೆ, ನೀರು, ಶೌಚಾಲಯ, ವಸತಿಗಾಗಿ ಮನೆಗಳು, ದೀಪ ಇತ್ಯಾದಿ ಮೂಲಭೂತ ಸೌಲಭ್ಯಗಳನ್ನು ಅಗತ್ಯವಾಗಿ ಒದಗಿಸಬೇಕಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಸರ್ಕಾರದ ಆದೇಶದಲ್ಲಿ ಈ ಯೋಜನೆಗಾಗಿ ಪ್ರಸ್ತುತ ಸಾಲಿನ ವಿಶೇಷ ಘಟಕ ಯೋಜನೆಯಡಿ ಕ್ರೋಢಿಕೃತ ಅನುದಾನದಲ್ಲಿ ರೂ.100.70 ಲಕ್ಷಗಳನ್ನು ಹಂಚಿಕೆ ಮಾಡಲಾಗಿದೆ. ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ:ಸಕಇ 70 ಎಸ್‌ಎಲ್‌ಪಿ 2006, ಬೆಂಗಳೂರು, ದಿನಾಂಕ: 11ನೇ ಅಕ್ಟೋಬರ್ 2006**

ಪ್ರಸ್ತಾವನೆಯನ್ನು ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ 2006-07ನೇ ಸಾಲಿಗೆ ರಾಜ್ಯದಲ್ಲಿ ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗ ಮತ್ತು ಹಿಂದುಳಿದ ವರ್ಗದವರ ಅತಿ ಹೆಚ್ಚು ಜನಸಂಖ್ಯೆ ಹೊಂದಿರುವ ಎರಡು ಗ್ರಾಮಗಳನ್ನು ಆಯ್ಕೆ ಮಾಡಿ ಈ ಗ್ರಾಮಗಳಲ್ಲಿ ಒಂದಕ್ಕೆ ಡಾ:ಬಿ.ಆರ್. ಅಂಬೇಡ್ಕರ್ ಗ್ರಾಮ ಮತ್ತು ಇನ್ನೊಂದಕ್ಕೆ ಶ್ರೀ ಬಾಬು ಜಗಜೀವನರಾಂ ಗ್ರಾಮವೆಂದು ಹೆಸರಿಸಿ ಈ ಎರಡು ಗ್ರಾಮಗಳ ಸರ್ವತೋಮುಖ ಅಭಿವೃದ್ಧಿಗಾಗಿ ಈ ಕೆಳಕಂಡ ಮಾರ್ಗಸೂಚಿಗಳನ್ನು ಅನುಸರಿಸಿ ಗ್ರಾಮಗಳನ್ನು ಆಯ್ಕೆ ಮಾಡಿ ಯೋಜನೆ ಅನುಷ್ಠಾನಗೊಳಿಸಲು ಸರ್ಕಾರದ ಅನುಮೋದನೆ ನೀಡಿ ಆದೇಶಿಸಿದೆ.

**ಗ್ರಾಮಗಳ ಆಯ್ಕೆ:**

ಈ ಕೆಳಗಿನ ಮಾನದಂಡಗಳನ್ನು ಅನುಸರಿಸಿ ರಾಜ್ಯದಲ್ಲಿ ಎರಡು ಗ್ರಾಮಗಳನ್ನು ಆಯ್ಕೆ ಮಾಡತಕ್ಕದ್ದು.

1. ಗ್ರಾಮವು ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗ ಹಾಗೂ ಹಿಂದುಳಿದ ವರ್ಗಗಳ ಜನಸಂಖ್ಯೆಯನ್ನು ಹೊಂದಿರಬೇಕು. ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಹಾಗೂ ಆರ್ಥಿಕವಾಗಿ ಬಹಳ ಹಿಂದುಳಿದಂತಹ ಪರಿಶಿಷ್ಟ ಜಾತಿಯ/ಪರಿಶಿಷ್ಟ ವರ್ಗದ ಜನರೇ ಹೆಚ್ಚಾಗಿ ವಾಸಿಸುವ ಗ್ರಾಮವಾಗಿರಬೇಕು. ಈ ಜಾತಿಗಳ ಪ್ರಮಾಣ ಶೇ.22 ಇರಬೇಕು. (ಪ.ಜಾ ಶೇಕಡ 16/ಪರಿಶಿಷ್ಟ ವರ್ಗ ಶೇಕಡಾ 6).
2. ಶೇಕಡಾವಾರು ಪ್ರಮಾಣದಲ್ಲಿ ಹೆಚ್ಚು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಜನಸಂಖ್ಯೆ ಹಾಗೂ ಕೃಷಿ ಕೂಲಿಕಾರರನ್ನು ಹೊಂದಿರಬೇಕು ಮತ್ತು ಕಡಿಮೆ ಮಹಿಳಾ ಸಾಕ್ಷರತೆಯನ್ನು ಹೊಂದಿರಬೇಕು.
3. ಸರ್ಕಾರದ ವಿವಿಧ ಅಭಿವೃದ್ಧಿ ಇಲಾಖೆಗಳ ಮೂಲಕ ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗದ ಸರ್ವಾಂಗೀಣ ಅಭಿವೃದ್ಧಿಗಾಗಿ ಅನುಷ್ಠಾನಗೊಳಿಸುವ ಕಾರ್ಯಕ್ರಮಗಳ ಬಗ್ಗೆ ಅರಿವು ಇಲ್ಲದೆ ಹಾಗೂ ಇಂತಹ ಕಾರ್ಯಕ್ರಮಗಳ ಪ್ರಯೋಜನವನ್ನು ಪಡೆಯದೇ ಇರುವ ಜನರು ಹೆಚ್ಚಾಗಿರುವ ಗ್ರಾಮವಾಗಿರಬೇಕು.
4. ಕಡುಬಡತನದಲ್ಲಿರುವ ಹಾಗೂ ನಾಗರೀಕ ಸೌಲಭ್ಯಗಳಿಂದ ವಂಚಿತವಾಗಿರುವ ಮೂಢನಂಬಿಕೆ ಮತ್ತು ಕಂದಾಚಾರಗಳಿಗೆ ಕಟ್ಟು ಬಿದ್ದು ಅನಾಗರೀಕ ಸ್ಥಿತಿಯಲ್ಲಿ ಜೀವನ ನಡೆಸುತ್ತಿರುವ ಕುಟುಂಬಗಳು ಹೆಚ್ಚಾಗಿ ವಾಸಿಸುವ ಗ್ರಾಮಗಳಾಗಿರಬೇಕು. ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗದ ಹಾಗೂ ಹಿಂದುಳಿದ ವರ್ಗದ ಸಾಕ್ಷರತೆ, ಬಡತನ ರೇಖೆಗಿಂತ ಕೆಳಗಿನ ಕುಟುಂಬಗಳು ಈ ದಾರುಣ ದುಸ್ಥಿತಿಯಲ್ಲಿ ಇರುವುದಕ್ಕೆ ಮಾನದಂಡವೆಂದು ಪರಿಗಣಿಸಬೇಕು.

ಈ ಯೋಜನೆಯನ್ನು ಪ್ರಸ್ತುತ ಸಾಲಿನ ವಿಶೇಷ ಘಟಕ ಯೋಜನೆಯಡಿ ಕ್ರೋಢೀಕೃತ ಅನುದಾನದಲ್ಲಿ ಹಂಚಿಕೆ ಮಾಡಿರುವ ರೂ.100.70 ಲಕ್ಷಗಳ ಮಿತಿಯಲ್ಲಿ ಅನುಷ್ಠಾನಗೊಳಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಎಫ್‌ಡಿ 405 ರೆಚ್ಚ-3/06, ದಿನಾಂಕ:31.8.2006ರಲ್ಲಿ ನೀಡಿರು ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ಶೇಖರಪ್ಪ**

ಪಿ.ಆರ್. 1500

ಸರ್ಕಾರದ ಅಧೀನ ಕಾರ್ಯದರ್ಶಿ,
ಸಮಾಜ ಕಲ್ಯಾಣ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಪಿ. ಸುಬ್ಬಾ, ಹಿಂದಿನ ತಹಶೀಲ್ದಾರ್, ಹುಣಸೂರು ತಾಲ್ಲೂಕು, ಹಾಲಿ ತಹಶೀಲ್ದಾರ್, ಕೊಳ್ಳೇಗಾಲ ತಾಲ್ಲೂಕುರವರ ಮೇಲಿನ ಆರೋಪಗಳ ಬಗ್ಗೆ ಅವರನ್ನು ಅಮಾನತ್ತಿನಲ್ಲಿರುವ ಬಗ್ಗೆ.

**ಓದಲಾಗಿದೆ :**

1) ಶ್ರೀ ಎನ್. ರಾಜು ಇಂಟೆಕ್, ಪತ್ರಿಕಾ ವರದಿಗಾರರು, ಬಜಾರ್ ರಸ್ತೆ, ಹುಣಸೂರು ಇವರು ಜಿಲ್ಲಾಧಿಕಾರಿಗಳು, ಮೈಸೂರು ಇವರಿಗೆ ಸಲ್ಲಿಸಿದ ಮನವಿ ದಿನಾಂಕ 13.7.2005 ಹಾಗೂ ಸರ್ಕಾರಕ್ಕೆ ಸಲ್ಲಿಸಿದ ದಿನಾಂಕ 24.10.2005ರ ಮನವಿ.

2) ಉಪವಿಭಾಗಾಧಿಕಾರಿಗಳು, ಹುಣಸೂರು ಉಪವಿಭಾಗ, ಹುಣಸೂರು ಇವರ ಪತ್ರ ಸಂ: ಎಲ್.ಆರ್.ಎಫ್. ಪಿ.ಆರ್.6: 05/06, ದಿನಾಂಕ:18.10.2005.

**ಪ್ರಸ್ತಾವನೆ :**

ಶ್ರೀ ಎನ್. ರಾಜು ಇಂಟಕ್, ಪತ್ರಿಕಾ ವರದಿಗಾರರು, ಟಿಪ್ಪು ಎಕ್ಸ್‌ಪ್ರೆಸ್, ಹುಣಸೂರು ಟೌನ್ ಇವರು ದಿನಾಂಕ: 13.7.2005 ರಂದು ಸಲ್ಲಿಸಿರುವ ದೂರು ಅರ್ಜಿಯಲ್ಲಿ ಹುಣಸೂರು ತಾಲ್ಲೂಕು ತಹಶೀಲ್ದಾರ್, ಪಿ.ಸುಬ್ಬಾ (ಹಾಲಿ ಕೊಳ್ಳೇಗಾಲ ತಾಲ್ಲೂಕು ತಹಶೀಲ್ದಾರ್) ರವರು ಅಧಿಕಾರ ವ್ಯಾಪ್ತಿಯನ್ನು ದುರುಪಯೋಗಪಡಿಸಿಕೊಂಡು ಇವರ ರಕ್ತ ಸಂಬಂಧಿಗಳ ಹೆಸರಿನಲ್ಲಿ ಕಿರಿಜಾಜಿ ಸ.ನಂ. 101ರಲ್ಲಿ 11.09 ಎ.ಗುಂ. ತೆಂಗಿನ ತೋಟವುಳ್ಳ ಆಸ್ತಿಯನ್ನು ಪತ್ನಿ, ಮಗಳು, ನಾದಿನಿ, ಬಾಮೈದ ಇವರ ಹೆಸರಿನಲ್ಲಿ ಅಕ್ರಮವಾಗಿ ಖರೀದಿ ಮಾಡಿರುವುದರಿಂದ ಇವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳುವಂತೆ ಕೋರಿರುತ್ತಾರೆ.

ಈ ಕುರಿತು ಉಪ ವಿಭಾಗಾಧಿಕಾರಿಗಳು ಹುಣಸೂರು ಉಪವಿಭಾಗ, ಹುಣಸೂರು ಇವರು ಮೇಲೆ ಓದಲಾದ (2)ರ ಪತ್ರದಲ್ಲಿ **ಕಳುಹಿಸಿರುವ ವರದಿಯನ್ನು ಪರಿಶೀಲಿಸಲಾಯಿತು. ದೂರುದಾರರು ಅವರ ಅರ್ಜಿಯಲ್ಲಿ ತಿಳಿಸಿರುವಂತೆ ಹಿಂದಿನ ಹುಣಸೂರು ತಹಶೀಲ್ದಾರರಾದ ಶ್ರೀ ಪಿ. ಸುಬ್ಬಾ ಇವರು ಹುಣಸೂರು ತಾಲ್ಲೂಕು ಕಿರಿಜಾಜಿ ಗ್ರಾಮದ ಸ.ನಂ.101ರ ಪೈಕಿ 11.09 ಎಗುಂ. ಜಮೀನುಗಳನ್ನು ಹುಣಸೂರು ಉಪ ನೋಂದಣಾಧಿಕಾರಿಗಳ ಕಛೇರಿಯಲ್ಲಿ ನೋಂದಣಿ ಮೂಲಕ ಈ ಕೆಳಕಾಣಿಸಿರುವವರ ಹೆಸರುಗಳಲ್ಲಿ ಖರೀದಿಸಿರುತ್ತಾರೆ ಎಂದು ವರದಿಯಲ್ಲಿ ತಿಳಿಸಲಾಗಿದೆ.**

| ಕ್ರ. ಸಂ. | ಸ. ನಂ. | ವಿಸ್ತೀರ್ಣ | ತರಹೆ | ಮಾರಾಟಗಾರನ ಹೆಸರು | ಖರೀದಿದಾರರ ಹೆಸರು | ಖರೀದಿದಾರರಿಗೂ ಹಿಂದಿನ ಹುಣಸೂರು ತಹಶೀಲ್ದಾರ್ ಶ್ರೀ ಪಿ. ಸುಬ್ಬಾ ರವರಿಗೆ ಇರುವ ಸಂಬಂಧ | ಖರೀದಿ ಮೊಬಲಗು ರೂ. |
|---|---|---|---|---|---|---|---|
| 1 | 101ರ ಪೈಕಿ | 1.00 | ಖುಷ್ಕಿ | ವಿ.ಎಸ್. ಹರೀಶ್ ಬಿನ್ ವಿ.ಸಿ. ಸಿದ್ದಯ್ಯ ಕಾರಮೋಡು ದಾಳಿಂಬೆ ಎಸ್ಟೇಟ್, ಪೊನ್ನಂಪೇಟೆ ಹೋ: ವಿರಾಜಪೇಟೆ ತಾ: ಕೊಡಗು ಜಿಲ್ಲೆ | ಬಾಲಕೃಷ್ಣ ಬಿನ್ ಕುಟ್ಟಪ್ಪನ್ | ಬಾಮೈದ | 50,000 |
| 2 | 101ರ ಪೈಕಿ | 1.00 | ಖುಷ್ಕಿ | -------- " -------- | ಪ್ರೇಮ ಕೋಂ ತಿಪ್ಪೇಸ್ವಾಮಿ | ನಾದಿನಿ | 50,000 |
| 3 | 101ರ ಪೈಕಿ | 3.00 | ಖುಷ್ಕಿ | -------- " -------- | ಸಂಧ್ಯ ಕೋಂ ಸುರೇಶ | ಮಗಳು | 1,50,000 |
| 4 | 101ರ ಪೈಕಿ | 6.09 | ಖುಷ್ಕಿ | -------- " -------- | ರತ್ನಮ್ಮ ಬಿನ್ ಕುಟ್ಟಪ್ಪನ್ | ಹೆಂಡತಿ | 3,42,000 |
| **ಜುಮ್ಲಾ** | | **11.09** | | | | | **5,92,000** |

ಸದರಿ ಜಮೀನನ್ನು ಖರೀದಿಸುವಾಗ ಶ್ರೀ ಪಿ. ಸುಬ್ಬಾ, ತಹಶೀದ್ದಾರ್, ಹುಣಸೂರು ಇವರು ಈ ಸಂಬಂಧ ಅಕ್ರಮಗಳನ್ನು ಎಸಗಿರುವುದಾಗಿ ಉಪ ವಿಭಾಗಾಧಿಕಾರಿಗಳು ಹುಣಸೂರು ರವರು ವರದಿ ಮಾಡಿರುತ್ತಾರೆ.

1. ಮೇಲ್ಕಂಡ ಜಮೀನಿನ ಖರೀದಿದಾರರಾದ 1) ಶ್ರೀ ಬಾಲಕೃಷ್ಣ (ಬಾವೈದ), 2) ಶ್ರೀಮತಿ ಪ್ರೇಮ (ನಾದಿನಿ), 3) ಸಂಧ್ಯ (ಮಗಳು), 4) ಶ್ರೀಮತಿ ರತ್ನಮ್ಮ (ಹೆಂಡತಿ) ಇವರುಗಳು ಹುಣಸೂರಿನ ಖಾಯಂ ವಾಸಿ ಅಲ್ಲದಿದ್ದರೂ, ಇವರುಗಳು ಕೃಷಿ ಕಾರ್ಮಿಕರಲ್ಲದಿದ್ದರೂ ಸಹ ಇವರುಗಳಿಗೆ ಹಾಗೂ ಹೆಂಡತಿ ಹೆಸರಿಗೂ ಮೇಲ್ಕಂಡ ಜಮೀನನ್ನು ಖರೀದಿಸಲು, ಕೃಷಿ ಕಾರ್ಮಿಕ ಧೃಢೀಕರಣ ಪತ್ರವನ್ನು ಅಕ್ರಮವಾಗಿ ನೀಡಿರುವುದು ಮೇಲ್ನೋಟಕ್ಕೆ ಧೃಡಪಡುತ್ತದೆ. ಈ ಎಲ್ಲಾ ಕಾರಣಗಳಿಂದ ಶ್ರೀ ಪಿ. ಸುಬ್ಬಾ ಅಂದಿನ ತಹಶೀಲ್ದಾರ್, ಹುಣಸೂರು ಪ್ರಸ್ತುತ ತಹಶೀದಾರ್, ಕೊಳ್ಳೇಗಾಲ ಇವರನ್ನು ಇಲಾಖಾ ವಿಚಾರಣೆ ಬಾಕಿ ಇಟ್ಟು, ಸೇವೆಯಿಂದ ಅಮಾನತ್ತು ಮಾಡಲು ಸರ್ಕಾರ ತೀರ್ಮಾನಿಸಿರುವುದರಿಂದ ಈ ಆದೇಶ.

**ಆದೇಶ ಸಂ: ಕಂ.ಇ. 70 ಎಡಿಇ 2006, ಬೆಂಗಳೂರು, ದಿನಾಂಕ: 13ನೇ ಅಕ್ಟೋಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 10(1)(ಡಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಪಿ. ಸುಬ್ಬಾ, ಹಿಂದಿನ ತಹಶೀಲ್ದಾರ್, ಹುಣಸೂರು ತಾಲ್ಲೂಕು, ಪ್ರಸ್ತುತ ತಹಶೀಲ್ದಾರ್, ಕೊಳ್ಳೇಗಾಲ ತಾಲ್ಲೂಕು, ಚಾಮರಾಜನಗರ ಜಿಲ್ಲೆ, ಇವರನ್ನು ಅವರ ವಿರುದ್ಧ ಇಲಾಖೆ ವಿಚಾರಣೆ ಕಾಯ್ದಿರಿಸಿ, ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅವರನ್ನು ಸೇವೆಯಿಂದ ಅಮಾನತ್ತುಗೊಳಿಸಿದೆ.

ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 98 ರನ್ವಯ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ. ಅಮಾನತ್ತಿನ ಅವಧಿಯಲ್ಲಿ ಜಿಲ್ಲಾಧಿಕಾರಿಗಳು, ಚಾಮರಾಜನಗರ ಜಿಲ್ಲೆ ಇವರ ಅನುಮತಿ ಪಡೆಯದೇ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶ್ರೀಮತಿ ಚಂದ್ರಶೇಖರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು-3).

ಪಿ.ಆರ್. 1530

## ಶಿಕ್ಷಣ ಸಚಿವಾಲಯ

**ವಿಷಯ :** ವೃತ್ತಿ ಶಿಕ್ಷಣ ಇಲಾಖೆಯ ಅರೆಕಾಲಿಕ ಉಪನ್ಯಾಸಕರು/ಅರೆಕಾಲಿಕ ಶಿಕ್ಷಕರ ಉತ್ತರ ಪತ್ರಿಕೆಗಳ ಮೌಲ್ಯ ಮಾಪಕರ ಹಾಗೂ ಇತರೆ ಸಿಬ್ಬಂದಿಗಳಿಗೆ ಸಂಭಾವನೆ, ಪ್ರಯಾಣ ಭತ್ಯೆ ಹಾಗೂ ದಿನಭತ್ಯೆಗಳನ್ನು ಚೆಕ್ ಮೂಲಕ ವಿತರಿಸುವ ಬಗ್ಗೆ.

**ಓದಲಾಗಿದೆ :** ನಿರ್ದೇಶಕರು, ವೃತ್ತಿ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು, ಇವರ ಪತ್ರ ಸಂಖ್ಯೆ: ಡಿವಿಇ/ಬಿ2/ಸಡಂ/ಚಿ/ಪಾ/01/2003-04, ದಿನಾಂಕ 23.5.2003.

**ಪ್ರಸ್ತಾವನೆ :**

1) 2002-03ನೇ ಸಾಲಿನಲ್ಲಿ ನಡೆದ ವಾರ್ಷಿಕ ಪರೀಕ್ಷಾ ಸಂಬಂಧದ ಮೌಲ್ಯಾಪಕರುಗಳಿಗೆ ಸಂಭಾವನೆ ಹಾಗೂ ಇತರೆ ಭತ್ಯೆಗಳನ್ನು ಪಾವತಿ ಮಾಡುವಲ್ಲಿ ನಗದಿಗೆ ಬದಲಾಗಿ ನಿರ್ದೇಶನಾಲಯವು ಮೈಸೂರು ಬ್ಯಾಂಕ್ ಶಾಖೆಯಲ್ಲಿ ಹೊಂದಿರುವ ಉಳಿತಾಯ ಖಾತೆ ಸಂಖ್ಯೆ: 135874ನ್ನು ಚಾಲ್ತಿ **ಖಾತೆಗೆ ಪರಿವರ್ತಿಸಿಕೊಂಡು ಚೆಕ್ ಮೂಲಕ ಪಾವತಿಸಲಾಗಿತ್ತೆಂದು ಇದು ತಾತ್ಕಾಲಿಕ ವ್ಯವಸ್ಥೆ ಆಗಿದ್ದು, ಇಲಾಖೆಯ ಅರೆಕಾಲಿಕ ಉಪನ್ಯಾಸಕರು/ಅರೆಕಾಲಿಕ ಶಿಕ್ಷಕರ ಸಂಭಾವನೆಯನ್ನು ಉತ್ತರ ಪತ್ರಿಕೆಗಳ ಮೌಲ್ಯಮಾಪಕರಿಗೆ ಹಾಗೂ ಪರೀಕ್ಷಾ ಸಿಬ್ಬಂದಿಗಳಿಗೆ ಸಂಭಾವನೆ, ಪ್ರಯಾಣ ಭತ್ಯೆ ಹಾಗೂ ದಿನಭತ್ಯೆಗಳಿಗೆ ಮಾತ್ರ ಸಂಬಂಧಿಸಿದಂತೆ ಚೆಕ್ ಮೂಲಕ ವಿತರಿಸುವ ವ್ಯವಸ್ಥೆ ಮಾಡುವಂತೆ ವೃತ್ತಿ ಶಿಕ್ಷಣ ಇಲಾಖಾ ನಿರ್ದೇಶಕರು ಮೇಲೆ ಓದಲಾದ ದಿನಾಂಕ 23.5.2003ರ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿರುವವರು. ಸರ್ಕಾರವು ಇದನ್ನು ಸಮಗ್ರವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.**

**ಸರ್ಕಾರದ ಆದೇಶ ಸಂಖ್ಯೆ: ಇಡಿ 31 ಟಿವಿಇ 2004, ಬೆಂಗಳೂರು, ದಿನಾಂಕ: 18ನೇ ಅಕ್ಟೋಬರ್ 2006**

2) ವೃತ್ತಿ ಶಿಕ್ಷಣ ಇಲಾಖೆಯ ಪರೀಕ್ಷಾ ಕಾರ್ಯಕ್ಕೆ ಹಾಜರಾಗುವ ಮೌಲ್ಯಮಾಪಕರಿಗೆ ಗೌರವಧನ, ಪ್ರಯಾಣ ಭತ್ಯೆ ಮತ್ತು ಸಂಭಾವನೆಯನ್ನು ಈ ಕೆಳಗೆ ವಿವರಿಸಿರುವ ವಿಧಾನವನ್ನು ಅನುಸರಿಸಿ ಚೆಕ್ ಮೂಲಕ ಪಾವತಿಸಲು ಮಂಜೂರಾತಿ ನೀಡಲಾಗಿದೆ.

(ಅ) ವೃತ್ತಿ ಶಿಕ್ಷಣ ನಿರ್ದೇಶನಾಲಯದ ನಿರ್ದೇಶಕರು ಅಥವಾ ಬೇರೆ ಯಾರಾದರೊಬ್ಬ ಜವಾಬ್ದಾರಿಯುತ ಅಧಿಕಾರಿಯವರು ಸುಭದ್ರವಾಗಿ ಬೀಗ ಹಾಕಿಟ್ಟು ಜೋಪಾನ ಮಾಡುವ ಸುರಕ್ಷಿತ ವ್ಯವಸ್ಥೆಯಲ್ಲಿ ಚೆಕ್ ಪುಸ್ತಕಗಳನ್ನು ಇಡತಕ್ಕದ್ದು.

(ಆ) ಉಪನ್ಯಾಸಕರು/ಶ್ರಮಿಕ ಶಿಕ್ಷಕರಿಗೆ ನೀಡಬೇಕಾದ ಗೌರವಧನ, ಪರೀಕ್ಷಾ ಕಾರ್ಯಕ್ಕೆ ನೇಮಕಗೊಂಡ ಪರೀಕ್ಷಕರಿಗೆ ಸಂಭಾವನೆ ಮತ್ತು ಪ್ರಯಾಣ ಭತ್ಯೆಗಳನ್ನು ನೀಡಲು ವಿನಹ ಬೇರಾವುದೇ ಉದ್ದೇಶಕ್ಕೆ ಸದರಿ ಚೆಕ್‌ಗಳನ್ನು ಬಳಸುವಂತಿಲ್ಲ;

(ಇ) ಯಾವುದೇ ಸಂದರ್ಭದಲ್ಲೂ ಸ್ವಯಂ (self) ಚೆಕ್ ಮೂಲಕ ಹಣ ಸೆಳೆಯುವಂತಿಲ್ಲ.

(ಈ) ಕರ್ನಾಟಕ ಆರ್ಥಿಕ ಸಂಹಿತೆಯಲ್ಲಿನ ಅನುಬಂಧ-1 ರಲ್ಲಿ ತೋರಿಸಿರುವಂತೆ ನಗದು ಪುಸ್ತಕದ ಪಾವತಿ ಭಾಗವು ಚೆಕ್ ಮೂಲಕದ ಪಾವತಿಯನ್ನು ದಾಖಲಿಸಲು ಒಂದು ಹೆಚ್ಚುವರಿ ಕಾಲಂ ಹೊಂದಿರತಕ್ಕದ್ದು.

(ಉ) ಖಜಾನೆ ಲೆಕ್ಕಗಳಲ್ಲಿ ಚೆಕ್ ಮೂಲಕ ಪಾವತಿಗಳನ್ನು "ವತ್ತಿ ಶಿಕ್ಷಣ ನಿರ್ದೇಶಕರು, ಬೆಂಗಳೂರು" ಎಂಬ ಶೀರ್ಷಿಕೆಗೆ ಹೊಂದಿಸಲಾಗುವುದು. ಖಜಾನಾಧಿಕಾರಿಗಳು, ರಾಜ್ಯ ಹುಜೂರ್ ಖಜಾನೆರವರು ಪಾಲಿಸುವ ವಿಧಾನಗಳು ಕರ್ನಾಟಕ ಖಜಾನೆ ಕೋಡ್‌ನಲ್ಲಿ ನಿಯಮ 269 ರಲ್ಲಿ ನಿಗದಿಪಡಿಸಿರುವ ವಿಧಾನಕ್ಕೆ ಸಮಾನವಾಗಿರತಕ್ಕದ್ದು. ಕರ್ನಾಟಕ ಖಜಾನೆ ಅಧಿನಿಯಮದಲ್ಲಿನ ನಿಯಮ 209 ರಲ್ಲಿ ವಿಧಿಸಿರುವಂತೆ ಕರ್ನಾಟಕ ಖಜಾನೆ ಅಧಿನಿಯಮ 28ರ ಪ್ರತಿಯೊಂದನ್ನು ಪ್ರತಿ ಮಾಸಾಂತ್ಯದ ನಂತರ ಖಜಾನಾಧಿಕಾರಿಗಳು "ನಿರ್ದೇಶಕರು, ವೃತ್ತಿ ಶಿಕ್ಷಣ, ಬೆಂಗಳೂರು" ಇವರಿಗೆ ಕಳುಹಿಸತಕ್ಕದ್ದು. ವೃತ್ತಿ ಶಿಕ್ಷಣ ನಿರ್ದೇಶಕರು ಸದರಿ ಪ್ರತಿಯಲ್ಲಿನ ನಮೂದುಗಳನ್ನು ನಿರ್ದೇಶನಾಲಯದ ನಗದು ಪುಸ್ತಕದಲ್ಲಿನ ನಮೂದುಗಳೊಂದಿಗೆ ತಾಳೆ ನೋಡಿ ಯಾವುದೇ ವ್ಯತ್ಯಾಸಗಳಿದ್ದಲ್ಲಿ ಅವುಗಳ ಹೊಂದಾಣಿಕೆ ಮಾಡತಕ್ಕದ್ದು.

(ಊ) ಚೆಕ್ ಮೂಲಕ ಡ್ರಾ ಮಾಡಲಾದ ಪ್ರತಿ ಖರ್ಚಿನ ವರ್ಗೀಕರಣದ ವಿವರವುಳ್ಳ ಮಾಸಿಕ ಖರ್ಚಿನ ತಃಖ್ತೆಯನ್ನು ಬರುವ ತಿಂಗಳ 10ನೇ ತಾರೀಖಿನೊಳಗೆ ಮಹಾಲೇಖಪಾಲರಿಗೆ ಒದಗಿಸತಕ್ಕದ್ದು.

(ಋ) ಸರ್ಕಾರದ ಅಥವಾ ಮಹಾಲೇಖಪಾಲರು ಸೂಚಿಸಬಹುದಾದ ಇನ್ನಾವುದೇ ವಿಧಾನವನ್ನು ಪಾಲಿಸತಕ್ಕದ್ದು.

(ೠ) ಚೆಕ್ ಮೂಲಕ ಡ್ರಾ ಮಾಡುವ ಲೆಕ್ಕವನ್ನು ಮಹಾಲೇಖಪಾಲರು (ಎ ಅಂಡ್ ಇ) ರವರಿಗೆ ನೀಡುವ ಹಾಗೂ ಚೆಕ್ ಪುಸ್ತಕವನ್ನು ಪಡೆಯಲು ಅಧಿಕಾರ ಹೊಂದಿದವರ ಹೆಸರು ಹಾಗೂ ಪದನಾಮಗಳನ್ನು ಸ್ಪಷ್ಟವಾಗಿ ತಿಳಿಸತಕ್ಕದ್ದು.

(ಎ) ಚೆಕ್‌ಗಳ ಮೂಲಕ ಹಣವನ್ನು ಬ್ಯಾಂಕಿನ ಖಾತೆಗೆ ಜಮಾ ಮಾಡುವಾಗ ಅಥವಾ ಖಾತೆಯಿಂದ ತೆಗೆಯುವ ಸಂದರ್ಭದಲ್ಲಿ ಲೆಕ್ಕ ಶೀರ್ಷಿಕೆಯನ್ನು ಸ್ಪಷ್ಟವಾಗಿ "8670-ಚೆಕ್ಕುಗಳು ಮತ್ತು ಬಿಲ್ಲುಗಳು 00-103-ಇತರೆ ಇಲಾಖಾ ಚೆಕ್‌ಗಳು-0-13-000-ನಿರ್ದೇಶಕರು, ವೃತ್ತಿ ಶಿಕ್ಷಣ ಇಲಾಖೆ" ಎಂಬುದಾಗಿ ಬರೆಯತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 266 ವೆಚ್ಚ-8/2004, ದಿನಾಂಕ: 16.7.2004 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎನ್. ಸೋಮಶೇಖರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ.

ಪಿ.ಆರ್. 1531

**ವಿಷಯ :** 2005-06ನೇ ಶೈಕ್ಷಣಿಕ ಸಾಲಿಗೆ ಚಿತ್ರದುರ್ಗದ ಶ್ರೀ ರಂಗನಾಥಸ್ವಾಮಿ ಎಜುಕೇಷನ್ ಸೊಸೈಟಿಯ ಎಸ್.ಆರ್.ಎಸ್. ಶಿಕ್ಷಣ ಮಹಾವಿದ್ಯಾಲಯಕ್ಕೆ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ.

**ಉಲ್ಲೇಖ :**
1. ದಿನಾಂಕ:27.12.2003ರ ಸಂ. ಇಡಿ 24 ಯುರ್‌ಸಿ 2003ರ ಸರ್ಕಾರಿ ಆದೇಶ.
2. ದಿನಾಂಕ:21.12.2005, ಸಂ. F.SRO/NCTE/B.Ed/2005-06/4817 ರ NCTEಯ ಪ್ರಾದೇಶಿಕ ನಿರ್ದೇಶಕರ ಪತ್ರ.
3. ದಿ:6.10.2006ರ ಪ್ರಾಚಾರ್ಯರು, ಎಸ್.ಆರ್.ಎಸ್. ಶಿಕ್ಷಣ ಮಹಾವಿದ್ಯಾಲಯ, ಚಿತ್ರದುರ್ಗ ಇವರ ಪತ್ರ.

**ಪೀಠಿಕೆ :**

1) ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ/ಬಿ.ಪಿ.ಎಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ. ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು. ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಇಡಿ. ಕೋರ್ಸುಗಳಿಗೆ ವಿದ್ಯಾಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ (1)ರಲ್ಲಿರುವ ಸರ್ಕಾರಿ ಆದೇಶದಲ್ಲಿ ಚಿತ್ರದುರ್ಗದ ಶ್ರೀ ರಂಗನಾಥಸ್ವಾಮಿ ಎಜುಕೇಷನ್ ಸೊಸೈಟಿಯು ಸೋನಿಯಾಗಾಂಧಿ ಶಿಕ್ಷಣ ಮಹಾವಿದ್ಯಾಲಯವನ್ನು ಚಿತ್ರದುರ್ಗದಲ್ಲಿ ಬಿ.ಎಡ್. ಕೋರ್ಸಿನೊಂದಿಗೆ 100 (ಒದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ **ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನಿಡಲಾಗಿತ್ತು. ಉಲ್ಲೇಖ (2)ರಲ್ಲಿರುವ ದಿನಾಂಕ:21.12.2005ರ ಆದೇಶದಲ್ಲಿ ಎನ್‌ಸಿಟಿಇಯು ಸದರಿ ಸಂಸ್ಥೆಯು ಎಸ್.ಆರ್.ಎಸ್. ಶಿಕ್ಷಣ ಮಹಾವಿದ್ಯಾಲಯವನ್ನು ಬಿ.ಎಡ್ ಕೋರ್ಸಿನೊಂದಿಗೆ 2005-06ನೇ ಸಾಲಿನಿಂದ ಅನ್ವಯಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ (3)ರಲ್ಲಿರುವ ದಿನಾಂಕ: 6.10.2006ರ ಪತ್ರದಲ್ಲಿ ಸದರಿ ಸಂಸ್ಥೆಯ ಪ್ರಾಚಾರ್ಯರು ತಮ್ಮ ಕಾಲೇಜಿನಲ್ಲಿ ಬಿ.ಎಡ್. ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.**

**ಸರ್ಕಾರಿ ಆದೇಶ ಸಂ. ಇಡಿ 45 ಯುಆರ್‌ಸಿ 2006, ಬೆಂಗಳೂರು, ದಿನಾಂಕ: 12ನೇ ಅಕ್ಟೋಬರ್ 2006**

3) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮಗಳ 2000ದ 59ನೇ ಪ್ರಕರಣದ 18ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್. ಕೋರ್ಸುಗಳಿಗೆ ಅಭ್ಯರ್ಥಿಗಳಿಗೆ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಚಿತ್ರದುರ್ಗದ ಶ್ರೀ ರಂಗನಾಥಸ್ವಾಮಿ ಎಜುಕೇಷನ್ ಸೊಸೈಟಿಯ ಎಸ್.ಆರ್.ಎಸ್. ಶಿಕ್ಷಣ ಮಹಾವಿದ್ಯಾಲಯ, ಚಿತ್ರದುರ್ಗ ಇದರ ಬಿ.ಎಡ್. ಕೋರ್ಸಿಗೆ 2005-06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎಂ. ನಂದಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು)

ಪಿ.ಆರ್. 1532

## LAW, JUSTICE AND HUMAN RIGHTS SECRETARIAT

**Sub :** Implementation of recommendations of the First National Judicial Pay Commission in respect of retired judicial officers - reg.

**Read :**
1) G.O. No. LAW 124 LAC 1997 dated 4.2.2004.
2) G.O. No. LAW 262 LAC 2005 dated 21.04.2006.
3) Letter No. PM/G1/FNJPC/2006-07/110 dated 22.5.2006.
4) Letter No. T.D/Pension/12/05-06 dated 27.5.2006.

**Preamble:**

In G.O. read at (2) above, sanction was accorded to grant the following benefits to the retired Judicial Officers with effect from 1.11.1999:-

(i) Cash payment of RS.1250-00 per month as domestic help allowance to every retired Judicial Officer which shall be paid upon producing a certificate to that effect to the pension disbursing authority.

(ii) All retired Judicial Officers shall be given a fixed monthly medical allowance of Rs.100-00 per month to meet day to day medical expenses.

(iii) All the medical facilities admissible to the serving judicial Officers with regard to the treatment and reimbursement of medical expenditure etc., shall be available to the retired Judicial Officers under the same terms and conditions.

In this connection, vide letter read at (3) above the Deputy Accountant General (Pensions) Office of the Accountant General (A&E), Bangalore has sought certain clarification. Similarly, in letter read at (4) above the Drector of Treasuries, Bangalore has also sought certain clarification.

After examining the same, following orders have been issued.

**Government Order No. LAW 262 LAC 2005, Bangalore, Dated: 13th October 2006**

In partial modification of the G.O. No. LAW 262 LAC 2005 dated 21.4.2006, Government are pleased to clarify as follows:-

(i) The cash payment of Rs.1250/- per month as domestic help allowance shall be drawn by the Principal District Judge of the place where the retiree has opted to settle, upon furnishing a certificate every month to the effect that he has engaged a servant. The expenditure on this account shall be debited to the Object Head Other allowance" on a salary bill.

(ii) The fixed medical allowance of Rs.100/- per month admissible to all the retired Judicial Officers to meet day-to-day medical expenses shall be debited to Major Head "2071-Pensions and retirement benefits".

(iii) The claim of the retired Judicial Officers for reimbursement of medical expenses shall be processed by the Principal District Judge of the place where the retiree has opted to settle. The claims processed by the Principal District Judge has to be preferred on a bill as in the case of the reimbursement of medical expenditure of serving Judicial Officers. The expenditure has to be classified under the Object Head "Other allowances" out of salary budget and head of account to which the salaries of serving Judicial Officers are drawn.

This issues with the concurrence of Finance Department vide note no. FD 691 Ser-2/2006 dated 11.10.2006.

By Order and in the name of the Governor of Karnataka,

**GANGANARASAIAH**

Under Secretary to Government,

Law, Justice and Human Rights Department

P.R. 1533

## ಇಂಧನ ಸಚಿವಾಲಯ

**ವಿಷಯ :** ಮೆ:: ಎಸ್.ಎಲ್.ಎಸ್. ಪವರ್ ಇಂಡಸ್ಟ್ರೀಸ್ ಲಿಮಿಟೆಡ್ ಕಂಪನಿಯವರಿಗೆ 6.25 ಮೆಗಾ ವ್ಯಾಟ್ ಸಾಮರ್ಥ್ಯದ ಸತ್ತೆಗಾಲ ಕಿರು ಜಲ ವಿದ್ಯುತ್ ಯೋಜನೆಗಾಗಿ ಕಾಲಾವಕಾಶ ವಿಸ್ತರಣೆ ಬಗ್ಗೆ.

**ಓದಲಾಗಿದೆ :**
1) ಸರ್ಕಾರಿ ಆದೇಶ ಸಂಖ್ಯೆ : ಡಿಇ 32 ಎನ್‌ಸಿಇ 2002 ದಿನಾಂಕ: 13.6.2002.
2) ಸರ್ಕಾರಿ ಆದೇಶ ಸಂಖ್ಯೆ : ಡಿಇ 32 ಎನ್‌ಸಿಇ 2002 ದಿನಾಂಕ: 7.9.2002.
3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆ.ಆರ್.ಇ.ಡಿ/06/ಸತ್ತೆಗಾಲ/2006/2232 ದಿನಾಂಕ: 21.10.2006.

**ಪ್ರಸ್ತಾವನೆ :**

ಓದಲಾದ (1)ರ ಆದೇಶದಲ್ಲಿ ಮೆ:: ಎಸ್.ಎಲ್.ಎಸ್. ಪವರ್ ಇಂಡಸ್ಟ್ರೀಸ್ ಲಿಮಿಟೆಡ್ ಕಂಪನಿಯವರಿಗೆ ಚಾಮರಾಜನಗರ ಜಿಲ್ಲೆಯ ಕೊಳ್ಳೆಗಾಲ ತಾಲ್ಲೂಕಿನ ಸತ್ತೆಗಾಲ ಗ್ರಾಮದ ಬಳಿ ಕಾವೇರಿ ನದಿಗೆ ಅಡ್ಡಲಾಗಿ 4 ಮೆಗಾ ವ್ಯಾಟ್ ಸಾಮರ್ಥ್ಯದ ಸತ್ತೆಗಾಲ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಓದಲಾದ (2)ರ ಆದೇಶದಲ್ಲಿ ಸದರಿ ಕಂಪನಿಗೆ ಹಂಚಿಕೆ ಮಾಡಲಾದ ಸತ್ತೆಗಾಲ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 4 ಮೆಗಾ ವ್ಯಾಟ್‌ನಿಂದ 6.25 ಮೆಗಾ ವ್ಯಾಟ್‌ಗೆ ಹೆಚ್ಚಿಸಲಾಗಿದೆ.

ಓದಲಾದ (3)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ:: ಎಸ್.ಎಲ್.ಎಸ್. ಪವರ್ ಇಂಡಸ್ಟ್ರೀಸ್ ಲಿಮಿಟೆಡ್ ಕಂಪನಿಗೆ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿದಿಂದ Synchronizing ಗಾಗಿ ಕೆಲವು ಪೂರ್ವಕಾರ್ಯಗಳು ನಡೆಯದಿರುವ ಕಾರಣ ಯೋಜನೆಯ ಅನುಷ್ಠಾನಕ್ಕೆ ವಿಳಂಬವಾಗಿರುವುದಾಗಿ ಅಭಿವೃದ್ಧಿದಾರರ ಕೋರಿಕೆ ಮೇರೆಗೆ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ಡಿಸೆಂಬರ್ 2006 ರವರೆಗೆ ವಿಸ್ತರಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಇದನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 410 ಎನ್‌ಸಿಇ 2006, ಬೆಂಗಳೂರು, ದಿನಾಂಕ: 25ನೇ ಅಕ್ಟೋಬರ್ 2006**

ಮೆ:: ಎಸ್.ಎಲ್.ಎಸ್. ಪವರ್ ಇಂಡಸ್ಟ್ರೀಸ್ ಲಿಮಿಟೆಡ್ ಕಂಪನಿಯವರಿಗೆ ಚಾಮರಾಜನಗರ ಜಿಲ್ಲೆಯ ಕೊಳ್ಳೇಗಾಲ ತಾಲ್ಲೂಕಿನ ಸತ್ತೆಗಾಲ ಗ್ರಾಮದ ಬಳಿ ಕಾವೇರಿ ನದಿಗೆ ಅಡ್ಡಲಾಗಿ 6.25 ಮೆಗಾ ವ್ಯಾಟ್ ಸಾಮರ್ಥ್ಯದ ಸತ್ತೆಗಾಲ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಸರ್ಕಾರವು ಕಾಲಾವಕಾಶವನ್ನು 31.12.2006ರವರೆಗೆ ವಿಸ್ತರಿಸಿ ಅನುಮತಿ ನೀಡಿದೆ.

ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್.ಬಿ.ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

ಪಿ.ಆರ್. 1535

## INFRASTRUCTURE DEVELOPMENT SECRETARIAT

**Sub :** Release of funds towards New Cost Sharing Railway Projects-Kottur-Harihar New Broad Gauge Railway Line Project - reg.

**Read :**
1) G.O. No. IDD 1 NSW 2002 dt. 22.11.2002.
2) G.O. No. IDD 1 NSW 2002 dt. 22.03.2002.
3) G.O. No. IDD 1 NSW 2002 dt. 19.02.2003.
4) G.O. No. IDD 47 NSW 2003 dt. 12.09.2003.
5) G.O. No. IDD 47 NSW 2003 dt. 22.12.2004.
6) G.O. No. IDD 47 NSW 2003 (P) dt. 26.03.2004.
7) G.O. No. IDD 51 NSW 2004 dt. 19.07.2004.
8) G.O. No. IDD 63 IDM 2005 dt. 25.05.2005.
9) G.O. No. IDD 66 NSW 05 dt. 15.12.2005.
10) G.O. No. IDD 68 NSW 2003 dt. 30.08.2006.
11) The letter of Chief Administrative Officer, SWR, Bangalore vide No. W.352 CN/BNC dated: 10.8.06.
12) G.O. No. FD 300 BRS 2006 dt. 12.10.2006.

**Preamble:**

Government of Karnataka has so far released Rs.29.24 crores towards its share of the Investment on Cost Sharing Projects, through various Government Orders read at Sl. Nos. (1) to (10) above.

2. The Chief Administrative Officer, South Western Railway, Bangalore, in his letter No.W.352 CN/BNC dated: 10.8.2006 indicated that the Railway have already spent RS. 25.03 crores towards Kottur-Harihar new broad gauge railway line, and out of which GoK have relased only Rs.5.00 crores and requested for immediate deposit of 2/3rd share of Government of Karnataka which comes to Rs.11.69 crores (2/3rd share of 25.03 comes to Rs.16.69 crores-5.00 crores = 11.69 crores)

3. Since the provision of Rs.35.00 crores provided in the current years budget in the Head of Account "5465-01-190-3-05-Cost sharing for new project-211-Investment (Plan)" is meant for Bangalore-Kengeri and Kengeri-Ramanagram railway line doubling project and out of which Rs. 18.74 crores have already been released to these projects, an additionality of Rs.10.00 crores from the Head of Account "5465-01-190-3-02-Hassan-Mangalore Gauge conversion project-211-Investments (Plan)" has been requested. The FD in their order dated 12.10.2006 read at Sl.No.(120 above, have accorded sanction for-re-appropriation of a sum of Rs.1000-00 lakhs under the Major Head of Account "5465-capital outlay on General Financial Trading Institutions during 2006-07. Hence this order.

**Government Order No.IDD 98 NSW 2003, Bangalore, Dated: 21st October 2006.**

After careful examination of the request of Railways, Government is pleased to release Rs.10.00 crores (Rupees Ten crores) only being the part of the balance 2/3rd share of Government of Karnataka by means of reappropriation from the Head of Account "5465-01-190-3-02-Hassan Mangalore gauge conversion project-211-Investments (Plan)" to the Head of Account "5465-01-190-3-05-Cost Sharing for new projects-211-Investment (Plan)" towards Cost Sharing Railway Projects-Kottur-Harihar new Broad gauge railway project.

2. The CFO and Company Secretary, iDeCK, is authorized to draw the amount on Payee's Receipt duly countersigned by the Under Secretary to Government, Infrastructure Development Department and iDeCK shall in-turn deposit the same with the Financial Advisor & Chief Accounts Officer (Cons), South Western Railway, Bangalore.

3. The Chief Engineer (Cons), South Western Railway, Bangalre shall arrange to furnish the monthly expenditure statement to Infrastructure development Department by fifth of every succeeding month.

4. This order issues with the concurrence of the Finance Department, vide its U.O. Note No. FD 1727/Ex-I/06 dated 16.10.2006.

By Order and in the name of the Governor of Karnataka,

**N. Manjula Geetha**

P.R. 1536

Under Secretary to Government,
Infrastructure Development Department.

**ENERGY SECRETARIAT**

**Sub :** Increase in capacity of the proposed Thermal power project at Toranagallu from 2 x 250 MW to 2 x 300 MW.

**Read :**
1) C & I epartment Order No. CI28 TC2000 Bangalore dated 30.6.2000.
2) Energy Department Letter No. DE 69 PPC2000 dated 6.7.2000 and 2.3.2001.
3) M/s JSW Energy Limited, Letter No. JSWEL /AUTH-EXP/06-07/3412 dated 30.9.2006.

**Preamble:**

Government of Karnataka has approved the proposal of M/s Jindal Tractable Power Company Limited for setting up 2 x 250 MW Thermal power project at Toranagallu in the global investors meet held in the month of June 2000. In-principal approval for the project has been conveyed vide C & I Department G.O. No. CI28 TC2000 Bangalore dated 30th June 2000. Energy Department vide Letter No. DE69 PPC2000 dated 6.7.2000 has accorded in-principle approval to M/s Jindal Tractable Power Company Limited to establish, operate and maintain the above project.

Energy Department, Government of Karnataka vide Letter No. DE 69 PPC 2000 dated 2.3.2001 has also approved project, under Section 18-A of the Electricity Act 1948.

Now the name of Jindal Tractable Power Company Limited has been changed to JSB Energy Limited. M/s JSW Energy Limited, in their Letter have informed that they have obtained Karnataka State Pollution Control Board clearance to the project in July 2001 and clearance rm Ministry of Environment & Forests (MoEF), Government of India in August 2004.

**Further, M/s JSW have stated that:**

(i) Imported coal will be used for generation of power.

(II) More than 50% of the power generated from this project will be supplied to M/s JSW Steel Limited and other industrial units.

iii) They had sought quotations for the supply of main plant equipment & machineries from different manufacturers for 250 MW, but no one has responded, as 50 MW is not a standard size internationally. In view of this, they have received the quotations for 300

MW units and they have placed order for the main plant equipments and have decided to set up 2 x 300 MW Thermal power plant instead of 2 x 250 MW.

iv) Earlier, the cost of the project was Rs. 2000 Crores for 2 x 250 MW. The revised estimated cost of the project RS.1860.00 Crores for 2 X 300 MW.

(v) project implementation will commence before 31.12.2006 and they expect to commission the plant in the month of December 2008.

M/s JSW have requested Government of Karnataka to revise the Government Orders for the enhanced capacity of 2 x 300 MW with the implementation to commence before 31.12.2006.

The request of M/s JSW Energy is to be considered on account of the following:-

i) 250 MW capacity equipment is not standard size inernationally.

ii) For 300 MW capacity units, the cost has come down to 1860 Crores.

Hence, the following order.

**Government Order No. DE 69 PPC 2000, Bangalore, Dated: 6th October 2006**

In the circumstances explained, in the preamble and after careful examination of the proposal of M/s JSW Energy Ltd, Government of Karnataka are pleased to accord approval to M/s JSW Energy Limited to increse in capacity of the Thermal power project at Toranagallu from 2 x 250 MW (500 MW to 2 x 300 MW (600 MW). The Company has to commence implementation of the project before 31.12.2006. The Company has to obtain all necessary clearances for the enhanced capacity of the project.

By Order and in the name of the Governor of Karnataka,

**Suresh.B.Krishnappanavar**

Under Secretary to Government,

Energy Department.

P.R. 1464

**Sub:** Setting up of a Committee to examine the various issues connected with making natural gas/LNG available in Karnataka for use in power generation, transport, domestic, industrial and commercial sectors and the establishment of a transmission and distribution network for gas in the State.

**Preamble:-**

Shri N. Ranganath, Chief Executive, SECON Private Limited, made a presentation on 27.10.2006 to the Chief Minister, Minister for Public Works & Energy, Minister for Large and Medium Scale Industries and several senior officers including Additional Chief Secretary and development Commissioner, ACS and Principal Secretary, Energy Department, Principal Secretary, Finance Department, Principal Secretary, Revenue Department, Principal Secretary, Infrastructure Development Development, Commissioner, BMRDA, MD, Karnataka Power Corporation, Commissioner, BDA, etc. on the establishment of a gas network in Karnataka. After discussion, Hon'ble Chief Minister directed that an Official Committee be set up to examine the various issues connected with the establishment of a network for the transmission and distribution of gas for use in power generation, transort and by domestic, commercial and industrial consumers. The Committee will submit its report to the Chief Minister.

**Government Order No. EN 109 PPC 2006, Bangalore, Dated: 28th October 2006**

Government are pleased to constitute a Committee consisting of the following members to examine the various issues connected with making natural gas/LNG available in Karnataka for use in power generation, transport, domestic, industrial and commercial sectors and the establishment of a transmission and distribution network for gas in the State:

| | | |
|---|---|---|
| 1. | Additional Chief Secretary and Principal Secretary to Govt. Energy Department | CHAIRMAN |
| 2. | Principal Secretary to Government, Finance Department, | MEMBER |
| 3. | Principal Secretary to Government, Infrastructure Development Dept, | MEMBER |
| 4. | Principal Secretary to Government, Revenue Department, | MEMBER |
| 5. | Principal Secretary to Government, Commerce & Industries Dept. | MEMBER |
| 6. | Principal Secretary to Government, Transport Department | MEMBER |
| 7. | Principal Secretary to Government, Food and Civil Supplies Dept, | MEMBER |
| 8. | Metropolitan Commissioner, Bangalore Metropolitan Regional Development Authority, | MEMBER |
| 9. | Chairman and Managing Director, Karnataka State Industrial Investment Development Corporation, | MEMBER |
| 10. | Managing Director, Karnataka Power Corporation Ltd. | MEMBER |

The Committe will submit its report to the Chief Minister through the Minister for Public Works & Energy.

By Order and in the name of the Governor of Karnataka,

**Suresh.B.Krishnappanavar**

P.R. 1553

Under Secretary to Government,

Energy Department.

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಶಿವಮೊಗ್ಗ ತಾಲ್ಲೋಕು ಕಸಬಾ ಹೋಬಳಿ ಸೋಮಿನಕೊಪ್ಪ ಗ್ರಾಮದ ಒಟ್ಟು ವಿಸ್ತೀರ್ಣ 118.01 ಎಕರೆ ಜಮೀನಿನಲ್ಲಿ ಪಶುವೈದ್ಯಕೀಯ ವಿದ್ಯಾಲಯ ಪ್ರಾರಂಭಿಸುವ ಬಗ್ಗೆ.

**ಓದಲಾಗಿದೆ :**

1) ಸರ್ಕಾರದ ಆದೇಶ ಸಂ: ನಅಇ 109 ಬೆಂರೂಪ್ರಾ 03 ದಿನಾಂಕ: 24.12.03.
2) ಸರ್ಕಾರದ ಪತ್ರ ಸಂ: ನಅಇ 22 ಬೆಂರೂಪ್ರಾ 06 ದಿನಾಂಕ: 5.4.06.
3) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಪಸು ಸಂಗೋಪನಾ ಮತ್ತು ಮೀನುಗಾರಿಕೆ ಇಲಾಖೆ ಇವರ ಅ.ಸ.ಪತ್ರ ಸಂ:ಎಎಚ್‌ಎಫ್ 81 ವಿಇಟಿ 06 (ಪಿ1), ದಿ: 19.5.06.
4) ಆಯುಕ್ತರು, ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರ ಇವರ ಪತ್ರ ಸಂ: ಶಿನಪ್ರಾ/ಭೂಸ್ವಾ/ಮಿಸ್-11/06-07, ದಿ:30.9.06.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರವು ತನ್ನ ವಸತಿ ಯೋಜನೆಗಾಗಿ ಶಿವಮೊಗ್ಗ ತಾಲ್ಲೋಕು, ಕಸಬಾ ಹೋಬಳಿ ಸೋಮಿನಕೊಪ್ಪ ಗ್ರಾಮದ ಸರ್ವೆ ನಂ: 24/1, 36, 134/1, 2 ಇತ್ಯಾದಿಗಳಲ್ಲಿ ಒಟ್ಟು ವಿಸ್ತೀರ್ಣ 118.1 ಎಕರೆ ಜಮೀನನ್ನು ಸ್ವಾಧೀನಪಡಿಸಿಕೊಂಡಿತ್ತು. ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರವು ರೂ.111.11 ಲಕ್ಷಗಳ ಅಂದಾಜು ವೆಚ್ಚದಲ್ಲಿ ವಸತಿ ಯೋಜನೆಯನ್ನು ಕೈಗೆತ್ತಿಕೊಳ್ಳಲು ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರ ಕಾಯ್ದೆ, 1876 ರ ಕಲಂ-18(3) ರನ್ವಯ ಕೆಲವು ಷರತ್ತುಗಳೊಂದಿಗೆ ಸರ್ಕಾರದ ಆದೇಶ ಸಂಖ್ಯೆ: ನಅಇ 109 ಬೆಂರೂಪ್ರಾ 2003, ದಿನಾಂಕ: 24.12.2003 ರಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರವು 118.01 ಎಕರೆ ಜಮೀನಿಗೆ ಐತೀರ್ಪು ಹಣ ರೂ.2,57,22,506.00 ಗಳನ್ನು ಪಾವತಿಸಲು ಸಹ ದಿನಾಂಕ: 5.4.06 ರಂದು ಅನುಮೋದನೆ ನೀಡಿರುತ್ತದೆ.

ಮೇಲೆ (3)ರಲ್ಲಿ ಓಲಾದ ಪತ್ರದಲ್ಲಿ ಪಶು ಸಂಗೋಪನಾ ಮತ್ತು ಮೀನುಗಾರಿಕೆ ಇಲಾಖೆಯ ಶಿವಮೊಗ್ಗದಲ್ಲಿ ಪಶುವೈದ್ಯ ಕಾಲೇಜು ಸ್ಥಾಪನೆಗೆ ಸರ್ಕಾರದ ಅನುಮೋದನೆ ನೀಡಲಾಗಿರುತ್ತದೆ. ಶಿವಮೊಗ್ಗ ತಾಲ್ಲೋಕು, ಕಸಬಾ ಹೋಬಳಿ ಸೋಮಿನಕೊಪ್ಪ ಗ್ರಾಮದ ಸರ್ವೆ ನಂ: 24/1, 36, 134/1, 2 ಇತ್ಯಾದಿಗಳಲ್ಲಿ ಸ್ವಾಧೀನಪಡಿಸಿಕೊಂಡಿರುವ ಒಟ್ಟು ವಿಸ್ತೀರ್ಣ 118.01 ಎಕರೆ ಜಮೀನಿನಲ್ಲಿ ಪಶುವೈದ್ಯಕೀಯ ವಿದ್ಯಾಲಯ ಪ್ರಾರಂಭಿಸಲು ಅನುಮತಿ ನೀಡುವಂತೆ ಪಶುಸಂಗೋಪನಾ ಮತ್ತು ಮೀನುಗಾರಿಕೆ ಇಲಾಖೆಯು ಕೋರಿರುತ್ತದೆ.

ಮೇಲೆ (4) ರಲ್ಲಿ ಓದಲಾದ ಪತ್ರದಲ್ಲಿ ಪ್ರಾಧಿಕಾರದಿಂದ ಸ್ವಾಧೀನಪಡಿಸಿಕೊಂಡ ಜಮೀನಿನಲ್ಲಿ ನಿವೇಶನಗಳಿಗೆ ಸಧ್ಯಕ್ಕೆ ಬೇಡಿಕೆ ಇಲ್ಲವೆಂದು ಮನಗಂಡಿರುವುದರಿಂದ ಮತ್ತು ಬಡಾವಣೆಗಳನ್ನು ನಿರ್ಮಿಸಲು ಸಾಕಷ್ಟು ಸಮಯ ತೆಗೆದುಕೊಳ್ಳುವುದರಿಂದ ಪಶುವೈದ್ಯಕೀಯ ವಿದ್ಯಾಲಯವನ್ನು ಸ್ಥಾಪಿಸಲು ಜಮೀನನ್ನು ಪಶುಸಂಗೋಪನಾ ಮತ್ತು ಮೀನುಗಾರಿಕೆ ಇಲಾಖೆಗೆ ಹಸ್ತಾಂತರಿಸಲು ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರವು ದಿನಾಂಕ: 8.6.06 ಮತ್ತು 25.9.06 ರಂದು ನಡೆದ ಪ್ರಾಧಿಕಾರದ ಸಭೆಯಲ್ಲಿ ತೀರ್ಮಾನಿಸಿ ಸದರಿ ಜಮೀನನ್ನು ರೂ:3.24 ಕೋಟಿ ಬೆಲೆಗೆ ಪಶುಸಂಗೋಪನಾ ಮತ್ತು ಮೀನುಗಾರಿಕೆ ಇಲಾಖೆಗೆ ಹಂಚಿಕೆ ಮಾಡಲು ನಿರ್ಧರಿಸಿರುವುದರ ಬಗ್ಗೆ ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಶಿವಮೊಗ್ಗ ಇವರು ವರದಿ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 22 ಬೆಂರೂಪ್ರಾ 2006, ಬೆಂಗಳೂರು, ದಿನಾಂಕ: 19ನೇ ಅಕ್ಟೋಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ (ನಿವೇಶನ ಹಂಚಿಕೆ) ನಿಯಮಾವಳಿಗಳು, 1991ಕ್ಕೆ ತಿದ್ದುಪಡಿ ಮಾಡುವುದನ್ನು ಬಾಕಿ ಇರಿಸಿ ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರವು ಶಿವಮೊಗ್ಗ ತಾಲ್ಲೋಕು, ಕಸಬಾ ಹೋಬಳಿ ಸೋಮಿನಕೊಪ್ಪ ಗ್ರಾಮದ ಸರ್ವೆ ನಂ: 24/1, 26, 142, 36ಪಿ, 134/1, 134/2 ಮತ್ತು 36/13 ರಲ್ಲಿ ಸ್ವಾಧೀನ ಪಡಿಸಿಕೊಂಡಿರುವ ಒಟ್ಟು ವಿಸ್ತೀರ್ಣ 118.1 ಎಕರೆ ಜಮೀನನ್ನು ರೂ.3.24 ಕೋಟಿ ಬೆಲೆಗೆ ಪಶು ವೈದ್ಯಕೀಯ ಕಾಲೇಜನ್ನು ಸ್ಥಾಪಿಸಲು ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆಗೆ ಹಂಚಿಕೆ ಮಾಡಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

ಸದರಿ ಭೂಮಿಯ ಕಬ್ಜವನ್ನು ಪಶುಸಂಗೋಪನಾ ಮತ್ತು ಮೀನುಗಾರಿಕೆ ಇಲಾಖೆ ರೂ.3.24 ಕೋಟಿ ಸಲ್ಲಿಸಿದ ನಂತರ ಹಸ್ತಾಂತರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ವೈ. ಸಾಗರ**

ಪಿ.ಆರ್. 1554

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

## ಇಂಧನ ಸಚಿವಾಲಯ

**ವಿಷಯ :** 1.5 ಮೆಗಾ ವ್ಯಾಟ್ ಸಾಮರ್ಥ್ಯದ ಕೊಡಗಿಹಳ್ಳಿ ಕಿರು ಜಲ ವಿದ್ಯುತ್ ಯೋಜನೆಯನ್ನು ಮೆ:: ಪುಸಾಲಾ ಪವರ್ ಪ್ರಾಜೆಕ್ಟ್ಸ್ ಪ್ರೈ., ಲಿ., ಕಂಪನಿಯ ಹೆಸರಿನಿಂದ ಮೆ:: ಸಾಯಿ ಕಿರಣ್ ಎಲೆಕ್ಟ್ರಿಕಲ್ ಸಿಸ್ಟಮ್ಸ್ ಲಿಮಿಟೆಡ್ ಎಂಬ ಕಂಪನಿಯ ಹೆಸರಿನಲ್ಲಿ ಅನುಷ್ಠಾನ ಮಾಡಲು ಅನುಮತಿಸುವ ಬಗ್ಗೆ.

**ಓದಲಾಗಿದೆ :**

1) **ಸರ್ಕಾರಿ ಆದೇಶ ಸಂಖ್ಯೆ: ಡಿಇ 205 ಎನ್‌ಸಿಇ 2001 ದಿನಾಂಕ: 25.1.2002.**
2) **ಕ್ರೆಡಲ್‌ನ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಕೊಡಗಿಹಳ್ಳಿ/2006/1345 ದಿನಾಂಕ: 12/19.5.2006.**

**ಪ್ರಸ್ತಾವನೆ :**

ಓದಲಾದ (1)ರ ಆದೇಶದಲ್ಲಿ ಮೆ:: ಪುಸಾಲಾ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಮೈಸೂರು ಜಿಲ್ಲೆಯ ಟಿ. ನರಸಿಪುರ ತಾಲ್ಲೂಕಿನ ಕೊಡಗಿಹಳ್ಳಿ ಗ್ರಾಮದ ಬಳಿ ಕಾವೇರಿ ನದಿಗೆ ಅಡ್ಡಲಾಗಿ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಕೊಡಗಿಹಳ್ಳಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಓದಲಾದ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಕಂಪನಿಯ ಅಭಿವೃದ್ಧಿದಾರರು ಆಡಳಿತಾತ್ಮಕ ಕಾರಣಗಳಿಂದ ಮೆ:: ಪುಸಾಲಾ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಯ ಹೆಸರಿನಲ್ಲಿ ಹಂಚಿಕೆ ಮಾಡಲಾಗಿರುವ 1.5 ಮೆಗಾವ್ಯಾಟ್ ಸಾಮರ್ಥ್ಯದ ಕೊಡಗಿಹಳ್ಳಿ ಕಿರು ಜಲ ವಿದ್ಯುತ್ ಯೋಜನೆಯನ್ನು ಮೆ:: ಸಾಯಿ ಕಿರಣ್ ಎಲೆಕ್ಟ್ರಿಕಲ್ ಸಿಸ್ಟಮ್ಸ್ ಲಿಮಿಟೆಡ್ ಕಂಪನಿಯ ಹೆಸರಿನಲ್ಲಿ ಅನುಷ್ಠಾನ ಮಾಡಲು ಅನುಮತಿಸಬೇಕೆಂದು ಕೋರಿರುವ ಹಿನ್ನೆಲೆಯಲ್ಲಿ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ ಶಿಫಾರಸ್ಸನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:-

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 262 ಎನ್‌ಸಿಇ 2006, ಬೆಂಗಳೂರು, ದಿನಾಂಕ: 26ನೇ ಅಕ್ಟೋಬರ್ 2006**

ಸರ್ಕಾರವು ಮೆ:: ಪುಸಾಲಾ ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಮೈಸೂರು ಜಿಲ್ಲೆಯ ಟಿ. ನರಸೀಪುರ ತಾಲ್ಲೂಕಿನ ಕೊಡಗಿಹಳ್ಳಿ ಗ್ರಾಮದ ಬಳಿ ಕಾವೇರಿ ನದಿಗೆ ಅಡ್ಡಲಾಗಿ ಹಂಚಿಕೆ ಮಾಡಲಾಗಿರುವ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಕೊಡಗಿಹಳ್ಳಿ ಕಿರು ಜಲ ವಿದ್ಯುತ್ ಯೋಜನೆಯನ್ನು ಮೆ:: ಸಾಯಿ ಕಿರಣ್ ಎಲೆಕ್ಟ್ರಿಕಲ್ ಸಿಸ್ಟಮ್ಸ್ ಲಿಮಿಟೆಡ್ ಎಂಬ ಕಂಪನಿಯ ಹೆಸರಿನಲ್ಲಿ (ಕೆ.ಆರ್.ಇ.ಡಿ.ಎಲ್.ನಿಂದ ತಾಂತ್ರಿಕ ಅನುಮೋದನೆ ಪಡೆಯುವ ಮೊದಲು ಮಿಕ್ಕುಳಿದ ವರ್ಗಾವಣೆ ಶುಲ್ಕವನ್ನು ಕೆ.ಆರ್.ಇ.ಡಿ.ಎಲ್.ಗೆ ತುಂಬಬೇಕೆಂಬ ಷರತ್ತಿನೊಂದಿಗೆ) ವರ್ಗಾವಣೆ ಮಾಡಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ.

ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್.ಬಿ.ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

ಪಿ.ಆರ್. 1556

## ನಗರಾಭಿವೃದ್ಧಿ ಸಚಿವಾಲಯ
## ತಿದ್ದುಪಡಿ
## ನಅಇ 51 ಬಿಎಂಆರ್ 2005, ಬೆಂಗಳೂರು, ದಿನಾಂಕ: 21ನೇ ಅಕ್ಟೋಬರ್ 2006

ಸರ್ಕಾರಿ ಆದೇಶ ಸಂಖ್ಯೆ: ನಅಇ 51 ಬಿಎಂಆರ್ 2002 ದಿನಾಂಕ:25.2.2006ರ ಆದೇಶ (ಅ) ಭಾಗದ "ಕೃಷಿ ಉತ್ಪಾದನಾ ಸಂಸ್ಕರಣಾ ಹಾಗೂ ಸಂಬಂಧಿಸಿದ ಘಟಕಗಳು ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯ ಆಗ್ರೋ ಫುಡ್ ಪ್ರೊಸೆಸಿಂಗ್ (Agro Food Processing) ಕೈಗಾರಿಕಾ ನೀತಿ, 1999 ರಲ್ಲಿ ರಲ್ಲಿ ವ್ಯಾಖ್ಯಾನಿಸಿರುವಂತೆ)" ಎಂಬುದರ ಬದಲಾಗಿ, " ಸ್ಥಳೀಯವಾಗಿ ದೊರೆಯುವ ಕೃಷಿ ಉತ್ಪಾದನಾ ಕಚ್ಚಾ ಸಾಮಗ್ರಿ ಆಧಾರಿತ ಕೃಷಿ ಉತ್ಪಾದನಾ ಸಂಸ್ಕರಣ ಹಾಗೂ ಸಂಬಂಧಿಸಿದ ಘಟಕಗಳು (ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯ ಆಗ್ರೋ ಫುಡ್ ಪ್ರೊಸೆಸಿಂಗ್ (Agro Food Processing) ಕೈಗಾರಿಕಾ ನೀತಿ, 2003 ಆದೇಶ ಸಂಖ್ಯೆ. CI 29 SPI 2002 ದಿನಾಂಕ: 28.6.2003ರಲ್ಲಿ ವ್ಯಾಖ್ಯಾನಿಸಿರುವಂತೆ)" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಉಳಿದಂತೆ ಸದರಿ ಆದೇಶದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್. ವಿಶ್ವನಾಥ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

ಪಿ.ಆರ್. 1560

## ಲೋಕೋಪಯೋಗಿ ಸಚಿವಾಲಯ

**ವಿಷಯ:** ಮೈಸೂರು ತಾಲ್ಲೂಕು ಚಾಮುಂಡೇಶ್ವರಿ ವಿಧಾನಸಭಾ ಕ್ಷೇತ್ರದಲ್ಲಿನ 37 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಇವರ ಪತ್ರ ಸಂಖ್ಯೆ:ಮುಇಂ:ಸಂಕದ:ರಶಾ:ಸ ಇಂ-1:ಮೈಸೂರು: ಮೇಲ್ದರ್ಜೆ:2006-07 ದಿನಾಂಕ: 16.9.06.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಮೈಸೂರು ತಾಲ್ಲೂಕು ಚಾಮುಂಡೇಶ್ವರಿ ವಿಧಾನಸಭಾ ಕ್ಷೇತ್ರದಲ್ಲಿನ 37 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಗ್ರಾಮೀಣ ರಸ್ತೆಗಳು ದುಸ್ಥಿತಿಯಲ್ಲಿದ್ದು, ವಾಹನಗಳು ಮತ್ತು ಸಾರ್ವಜನಿಕರು ಓಡಾಡಲು ತುಂಬಾ ತೊಂದರೆಯಾಗಿರುತ್ತದೆ ಆದುದರಿಂದ ಈ ಕೆಳಕಂಡ ಗ್ರಾಮೀಣ ರಸ್ತೆಗಳನ್ನು ಸಾರ್ವಜನಿಕರ ಹಿತದೃಷ್ಟಿಯಿಂದ ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವುದು ಅವಶ್ಯಕವಾಗಿರುತ್ತದೆ ಎಂದು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು ಇವರು ವರದಿ ಮಾಡಿರುತ್ತಾರೆ.

| ಕ್ರ. ಸಂ. | ರಸ್ತೆಯ ವಿವರ | ಉದ್ದ (ಕಿಮೀ) |
|---|---|---|
| 1. | ಇಲವಾಲ - ಸಾಗಲಕಟ್ಟೆ ರಸ್ತೆ | 11.20 |
| 2. | ಎಂ.ಬಿ. ರಸ್ತೆಯಿಂದ ರಟ್ನಹಳ್ಳಿ ದಡದಕಲ್ಲಹಳ್ಳಿ ಮಾರ್ಗ ಯಾಚೇಗೌಡನಹಳ್ಳಿಗೆ ಸೇರುವ ರಸ್ತೆ | 7.50 |
| 3. | ಶ್ರವಣಗುಡ್ಡ ಲೂಪ್ ರಸ್ತೆ | 7.60 |
| 4. | ಇಲವಾಲ-ಸಾಗರಕಟ್ಟೆ ರಸ್ತೆಯಿಂದ ಛತ್ರದ ಕೊಪ್ಪಲು, ಕಲ್ಲೂರು, ಯಡಹಳ್ಳಿ ಮಾರ್ಗ ಮೀನಾಕ್ಷಿಪುರ ರಸ್ತೆ | 12.50 |

| ಕ್ರ. ಸಂ. | ರಸ್ತೆಯ ವಿವರ | ಉದ್ದ (ಕಿಮೀ) |
|---|---|---|
| 5. | ಯಡಹಳ್ಳಿಯಿಂದ ಅಮಚವಾಡಿ ರಸ್ತೆ | 4.00 |
| 6. | ಉಂಡವಾಡಿ ಮಲ್ಲೇಗೌಡನಕೊಪ್ಪಲು ಮೇಗಳಾಪುರ ಮೈದನಹಳಿ-ಇಲವಾಲ- ಬೆಳಗೊಳ ರಸ್ತೆ | 8.00 |
| 7. | ಹೊಸಕೋಟೆಯಿಂದ ಕೊಮ್ಮೆಗೌಡನಕೊಪ್ಪಲು ಗ್ರಾಮಕ್ಕೆ ಸೇರುವ ರಸ್ತೆ | 5.00 |
| 8. | ಬೆಳವಾಡಿ ಗೇಟಿನಿಂದ ಕೂರ್ಗಳ್ಳಿ ಕೆ.ಆರ್.ಎಸ್. ರಸ್ತೆ | 2.00 |
| 9. | ಇಲವಾಲ-ಸಾಗರಕಟ್ಟೆ ರಸ್ತೆಯಿಂದ ಚಿಕ್ಕನಹಳ್ಳಿ ಮಾರ್ಗ ಆನಂದೂರು ಸೇರುವ ರಸ್ತೆ | 8.00 |
| 10. | ಬಿ.ಎಂ. ರಸ್ತೆಯಿಂದ ನಾಗನಹಳ್ಳಿ ಮಾರ್ಗ ಲಕ್ಷ್ಮೀಪುರ ರಸ್ತೆ | 4.00 |
| 11. | ಕೆ.ಆರ್.ಎಸ್. ರಸ್ತೆಯಿಂದ ನಾಗನಹಳ್ಳಿ ಮಾರ್ಗ ಶ್ಯಾಡನಹಳ್ಳಿ ರಸ್ತೆ | 5.50 |
| 12. | ಎಂ.ಬಿ.ಜಿ. ರಸ್ತೆಯಿಂದ ಶೆಟ್ಟಿನಾಯ್ಕನಹಳ್ಳಿ-ಬೊಮ್ಮೇನಹಳ್ಳಿ ಮಾರ್ಗ ನಾಗವಾಲ ರಸ್ತೆಗೆ ಸೇರುವ ರಸ್ತೆ | 6.00 |
| 13. | ಎಂ.ಎಂ. ರಸ್ತೆಯಿಂದ ಅರಸಿನ ಕೆರೆ ಮಾರ್ಗ ಅಹಲ್ಯದವರೆಗೆ ರಸ್ತೆ | 6.50 |
| 14. | ಉದ್ಬೂರು-ರಾಂಪುರ ರಸ್ತೆಯಿಂದ ಟಿ.ಕಾಟೂರು ಮಾರ್ಗ ಅಹಲ್ಯದವರೆಗೆ ರಸ್ತೆ | 12.20 |
| 15. | ಜಯಪುರ-ಕಡಕೊಳ ರಸ್ತೆಯಿಂದ ದೂರ ವಯಾ ಮಾರ್ಬಳಿಹುಂಡಿ-ಮಾರ್ಬಳ್ಳಿ ರಸ್ತೆ | 10.00 |
| 16. | ಎಂ.ಎಂ. ರಸ್ತೆಯಿಂದ ದಡದಹಳ್ಳಿ-ಬ್ಯಾತಹಳ್ಳಿ ಮಾರ್ಗ ದೊಡ್ಡಸಾನ್ಯ ರಸ್ತೆ | 12.00 |
| 17. | ಎಂ.ಎಂ. ರಸ್ತೆಯಿಂದ ಕೆರೆಹುಂಡಿ, ಮುಳ್ಳೂರು ತಿಬ್ಬಯ್ಯನಹುಂಡಿ ಮಾರ್ಗ ಬಲ್ಲಹಳ್ಳಿ ರಸ್ತೆ | 8.20 |
| 18. | ಎಂ.ಎಂ. ರಸ್ತೆಯಿಂದ ಡಿ. ಸಾಲುಂಡಿ, ಉದ್ಬೂರು-ಸಿಂದುವಳ್ಳಿ ಮಾರ್ಗ ದಡದಹಳ್ಳಿ ರಸ್ತೆ | 9.50 |
| 19. | ಬಿ.ಹೆಚ್.ಎ. ರಸ್ತೆಯಿಂದ ಕೂಡನಹಳ್ಳಿ, ಮಾಕನಹುಂಡಿ ಮಾರ್ಗ ಕೋಚನಹಳ್ಳಿ ರಸ್ತೆ (ತಾಲ್ಲೂಕು ಗಡಿಯವರೆಗೆ) | 5.00 |
| 20. | ಬಿ.ಹೆಚ್.ಎ ರಸ್ತೆಯಿಂದ ಹಡಜನ-ಮಾರಶೆಟ್ಟಳ್ಳಿ-ಜಂತಗಳ್ಳಿ-ಮೊಸಂಬಾಯನಹಳ್ಳಿ ಮಾರ್ಗ ವರುಣಹೊಸಕೋಟೆಗೆ ಸೇರುವ ರಸ್ತೆ | 12.00 |
| 21. | ಮೈಸೂರು-ಟಿ. ನರಸೀಪುರ ರಸ್ತೆಯಿಂದ ದುದ್ದಗೆರೆ-ಹೊಸಹಳ್ಳಿ ಮಾರ್ಗ ಕುಪ್ಪೇಗಾಲ ರಸ್ತೆಗೆ ಸೇರುವ ರಸ್ತೆ | 10.00 |
| 22. | ಜಾಕಿ ವಸತಿಗೃಹದಿಂದ ಲಲಿತಾದ್ರಿಪುರ ಮಾರ್ಗವಾಗಿ ಬಿ.ಹೆಚ್.ಎ. ರಸ್ತೆ | 9.50 |
| 23. | ದಂಡೀಕೆರೆ ರಸ್ತೆಯಿಂದ ಪಿಲ್ಲಹಳ್ಳಿ, ವರಕೊಡು-ಹೊಸಹುಂಡಿ-ಬಡಗಲಹುಂಡಿ-ಮೆಲ್ಲಹಳ್ಳಿ ಮಾರ್ಗವಾಗಿ ಹಳ್ಳಿಕೆರೆಹುಂಡಿ ರಸ್ತೆ. | 13.60 |
| 24. | ಬಿ.ಎನ್. ರಸ್ತೆಯಿಂದ ಕೂಡನಹಳ್ಳಿ ಸೋಮೇಶ್ವರಪುರ-ಕುಂಬರಹಳ್ಳಿ-ಮಾರಶೆಟ್ಟಳ್ಳಿ ಮಾರ್ಗವಾಗಿ ಲಲಿತಾದ್ರಿಪುರ ರಸ್ತೆ | 13.00 |
| 25. | ಬಿ.ಎನ್. ರಸ್ತೆಯಿಂದ ಮರಸೆ-ಮಾಕನಹುಂಡಿ-ದೇವಲಾಪುರ ಮಾರ್ಗವಾಗಿ ಸೋಮೇಶ್ವರಪುರ ರಸ್ತೆ | 7.80 |
| 26. | ಇಲವಾಲ-ಸಾಗರಕಟ್ಟೆ ರಸ್ತೆಯಿಂದ ಯಲಚಹಳ್ಳಿ ಮೇಗಳಾಪುರ ಮಾರ್ಗವಾಗಿ ರಸ್ತೆ. | 7.00 |
| 27. | ರಾಷ್ಟ್ರೀಯ ಹೆದ್ದಾರಿ 212 ರಿಂದ ಆಲನಹಳ್ಳಿ, ಭುಗತಗಳಿ, ವಾಜಮಂಗಲ ಮಾರ್ಗವಾಗಿ ವರಕೋಡು ರಸ್ತೆಯನ್ನು ಸೇರುವ ರಸ್ತೆ. | 8.00 |
| 28. | ಮೈಸೂರು ಹುಣಸೂರು ಮುಖ್ಯ ರಸ್ತೆಯಿಂದ ನಾಗವಾಲ ರಸ್ತೆ. | 3.80 |
| 29. | ಗುಂಗ್ರಾಲ್ ಛತ್ರ - ಕೆ. ನಾಗನಹಳ್ಳಿ ರಸ್ತೆ. | 4.50 |
| 30. | ಕೆ. ಹೆಮ್ಮನಹಳ್ಳಿಯಿಂದ ಹುಯಿಲಾಳು ಮಾರ್ಗ ಇಲವಾಲ, ಅಲೋಕ ರಸ್ತೆ. | 10.00 |
| 31. | ರಾಷ್ಟ್ರೀಯ ಹೆದ್ದಾರಿ 212 ರಿಂದ ಪುಟ್ಟೇಗೌಡನಹುಂಡಿ-ಚಟ್ಟಹಳ್ಳಿ-ಚಟ್ಟಹಳ್ಳಿ ಪಾಳ್ಯ ಮಾರ್ಗವಾಗಿ ತಾಲ್ಲೂಕು ಗಡಿಯವರೆಗೆ. | 5.00 |
| 32. | ಎಂ.ಎಂ. ರಸ್ತೆಯಿಂದ ಮಹದೇವಪುರ, ಬೆಟ್ಟದಬೀಡು ಮಾರ್ಗವಾಗಿ ಗುಮಚನಹಳ್ಳಿ ರಸ್ತೆಯನ್ನು ಸೇರುವ ರಸ್ತೆ | 5.00 |
| 33. | ಜಯಪುರದಿಂದ ಮಾವಿನಹಳ್ಳಿ ಸೇರುವ ರಸ್ತೆ | 2.50 |
| 34. | ಕೆ.ಆರ್.ಎಸ್. ನೇರ ರಸ್ತೆಯಿಂದ ಮಾರ್ಗ ಕೈಗಾರಿಕೆ ಪ್ರದೇಶಕ್ಕೆ ಸೇರುವ ರಸ್ತೆ | 1.20 |
| 35. | ಎಂ.ಬಿ. ರಸ್ತೆಯಿಂದ ಕೆ.ಆರ್.ಎಸ್. ನೇರ ರಸ್ತೆಯಿಂದ ಮಾರ್ಗ ಬೆಳವಾಡಿ ಕೂರ್ಗಳ್ಳಿ | 4.50 |
| 36. | ಎಂ.ಬಿ. ರಸ್ತೆಯಿಂದ ಹೂಟಗಳ್ಳಿಗೆ ಸೇರುವ ರಸ್ತೆ (ಲೂಪ್ ರಸ್ತೆಗಳು) | 1.20 |
| 37. | ಎಂ.ಬಿ. ರಸ್ತೆಯಿಂದ ಎಸ್.ಆರ್.ಎಸ್. ಕಾಲೋನಿ ಮೂಲಕ ಹೂಟಗಳ್ಳಿಗೆ ಸೇರುವ ರಸ್ತೆ (ಲೂಪ್ ರಸ್ತೆಗಳು) | 1.30 |

**ಸರ್ಕಾರಿ ಆದೇಶ ಸಂಖ್ಯೆ: ಲೋಇ 267 ಸಿಆರ್‌ಎಂ 2006, ಬೆಂಗಳೂರು, ದಿನಾಂಕ: 20ನೇ ಸೆಪ್ಟೆಂಬರ್ 2006**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಈ ಕೆಳಕಂಡ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆ ನೀಡಲಾಗಿದೆ.

| ಕ್ರ. ಸಂ. | ರಸ್ತೆಯ ವಿವರ | ಉದ್ದ (ಕಿಮೀ) |
|---|---|---|
| 1. | ಇಲವಾಲ - ಸಾಗಲಕಟ್ಟೆ ರಸ್ತೆ | 11.20 |
| 2. | ಎಂ.ಬಿ. ರಸ್ತೆಯಿಂದ ರಟ್ನಹಳ್ಳಿ ದಡದಕಲ್ಲಹಳ್ಳಿ ಮಾರ್ಗ ಯಾಚೇಗೌಡನಹಳ್ಳಿಗೆ ಸೇರುವ ರಸ್ತೆ | 7.50 |
| 3. | ಶ್ರವಣಗುಡ್ಡ ಲೂಪ್ ರಸ್ತೆ | 7.60 |
| 4. | **ಇಲವಾಲ-ಸಾಗರಕಟ್ಟೆ ರಸ್ತೆಯಿಂದ ಛತ್ರದ ಕೊಪ್ಪಲು, ಕಲ್ಲೂರು, ಯಡಹಳ್ಳಿ ಮಾರ್ಗ ಮೀನಾಕ್ಷಿಪುರ ರಸ್ತೆ** | **12.50** |
| 5. | **ಯಡಹಳ್ಳಿಯಿಂದ ಅಮಚವಾಡಿ ರಸ್ತೆ** | **4.00** |
| 6. | **ಉಂಡವಾಡಿ ಮಲ್ಲೇಗೌಡನಕೊಪ್ಪಲು ಮೇಗಳಾಪುರ ಮೈದನಹಳ್ಳಿ-ಇಲವಾಲ- ಬೆಳಗೊಳ ರಸ್ತೆ** | **8.00** |

| ಕ್ರ. ಸಂ. | ರಸ್ತೆಯ ವಿವರ | ಉದ್ದ (ಕಿಮೀ) |
|---|---|---|
| 7. | ಹೊಸಕೋಟೆಯಿಂದ ಕೊಮ್ಮೆಗೌಡನಕೊಪ್ಪಲು ಗ್ರಾಮಕ್ಕೆ ಸೇರುವ ರಸ್ತೆ | 5.00 |
| 8. | ಬೆಳವಾಡಿ ಗೇಟಿನಿಂದ ಕೂರ್ಗಳ್ಳಿ ಕೆ.ಆರ್.ಎಸ್. ರಸ್ತೆ | 2.00 |
| 9. | ಇಲವಾಲ-ಸಾಗರಕಟ್ಟೆ ರಸ್ತೆಯಿಂದ ಚಿಕ್ಕನಹಳ್ಳಿ ಮಾರ್ಗ ಆನಂದೂರು ಸೇರುವ ರಸ್ತೆ | 8.00 |
| 10. | ಬಿ.ಎಂ. ರಸ್ತೆಯಿಂದ ನಾಗನಹಳ್ಳಿ ಮಾರ್ಗ ಲಕ್ಷ್ಮೀಪುರ ರಸ್ತೆ | 4.00 |
| 11. | ಕೆ.ಆರ್.ಎಸ್. ರಸ್ತೆಯಿಂದ ನಾಗನಹಳ್ಳಿ ಮಾರ್ಗ ಶ್ಯಾಡನಹಳ್ಳಿ ರಸ್ತೆ | 5.50 |
| 12. | ಎಂ.ಬಿ.ಜಿ. ರಸ್ತೆಯಿಂದ ಶೆಟ್ಟಿನಾಯ್ಕನಹಳ್ಳಿ-ಬೊಮ್ಮೇನಹಳ್ಳಿ ಮಾರ್ಗ ನಾಗವಾಲ ರಸ್ತೆಗೆ ಸೇರುವ ರಸ್ತೆ | 6.00 |
| 13. | ಎಂ.ಎಂ. ರಸ್ತೆಯಿಂದ ಅರಸಿನ ಕೆರೆ ಮಾರ್ಗ ಅಹಲ್ಯದವರೆಗೆ ರಸ್ತೆ | 6.50 |
| 14. | ಉದ್ಬೂರು-ರಾಂಪುರ ರಸ್ತೆಯಿಂದ ಟಿ.ಕಾಟೂರು ಮಾರ್ಗ ಅಹಲ್ಯದವರೆಗೆ ರಸ್ತೆ | 12.20 |
| 15. | ಜಯಪುರ-ಕಡಕೊಳ ರಸ್ತೆಯಿಂದ ದೂರ ವಯಾ ಮಾರ್ಬಳಿಹುಂಡಿ-ಮಾರ್ಬಳ್ಳಿ ರಸ್ತೆ | 10.00 |
| 16. | ಎಂ.ಎಂ. ರಸ್ತೆಯಿಂದ ದಡದಹಳ್ಳಿ-ಬ್ಯಾತಹಳ್ಳಿ ಮಾರ್ಗ ದೊಡ್ಡಸಾನ್ಯ ರಸ್ತೆ | 12.00 |
| 17. | ಎಂ.ಎಂ. ರಸ್ತೆಯಿಂದ ಕೆರೆಹುಂಡಿ, ಮುಳ್ಳೂರು ತಿಬ್ಬಯ್ಯನಹುಂಡಿ ಮಾರ್ಗ ಬಲ್ಲಹಳ್ಳಿ ರಸ್ತೆ | 8.20 |
| 18. | ಎಂ.ಎಂ. ರಸ್ತೆಯಿಂದ ಡಿ. ಸಾಲುಂಡಿ, ಉದ್ಬೂರು-ಸಿಂದುವಳ್ಳಿ ಮಾರ್ಗ ದಡದಹಳ್ಳಿ ರಸ್ತೆ | 9.50 |
| 19. | ಬಿ.ಹೆಚ್.ಎ. ರಸ್ತೆಯಿಂದ ಕೂಡನಹಳ್ಳಿ, ಮಾಕನಹುಂಡಿ ಮಾರ್ಗ ಕೋಚನಹಳ್ಳಿ ರಸ್ತೆ (ತಾಲ್ಲೂಕು ಗಡಿಯವರೆಗೆ) | 5.00 |
| 20. | ಬಿ.ಹೆಚ್.ಎ ರಸ್ತೆಯಿಂದ ಹಡಜನ-ಮಾರಶೆಟ್ಟಳ್ಳಿ-ಜಂತಗಳ್ಳಿ-ಮೊಸಂಬಾಯನಹಳ್ಳಿ ಮಾರ್ಗ ವರುಣಹೊಸಕೋಟೆಗೆ ಸೇರುವ ರಸ್ತೆ | 12.00 |
| 21. | ಮೈಸೂರು-ಟಿ. ನರಸೀಪುರ ರಸ್ತೆಯಿಂದ ದುದ್ದಗೆರೆ-ಹೊಸಹಳ್ಳಿ ಮಾರ್ಗ ಕುಪ್ಪೇಗಾಲ ರಸ್ತೆಗೆ ಸೇರುವ ರಸ್ತೆ | 10.00 |
| 22. | ಜಾಕಿ ವಸತಿಗೃಹದಿಂದ ಲಲಿತಾದ್ರಿಪುರ ಮಾರ್ಗವಾಗಿ ಬಿ.ಹೆಚ್.ಎ. ರಸ್ತೆ | 9.50 |
| 23. | ದಂಡೀಕೆರೆ ರಸ್ತೆಯಿಂದ ಪಿಲ್ಲಹಳ್ಳಿ, ವರಕೊಡು-ಹೊಸಹುಂಡಿ-ಬಡಗಲಹುಂಡಿ-ಮೆಲ್ಲಹಳ್ಳಿ ಮಾರ್ಗವಾಗಿ ಹಳ್ಳಿಕೆರೆಹುಂಡಿ ರಸ್ತೆ. | 13.60 |
| 24. | ಬಿ.ಎನ್. ರಸ್ತೆಯಿಂದ ಕೂಡನಹಳ್ಳಿ ಸೋಮೇಶ್ವರಪುರ-ಕುಂಬರಹಳ್ಳಿ-ಮಾರಶೆಟ್ಟಳ್ಳಿ ಮಾರ್ಗವಾಗಿ ಲಲಿತಾದ್ರಿಪುರ ರಸ್ತೆ | 13.00 |
| 25. | ಬಿ.ಎನ್. ರಸ್ತೆಯಿಂದ ಮರಸೆ-ಮಾಕನಹುಂಡಿ-ದೇವಲಾಪುರ ಮಾರ್ಗವಾಗಿ ಸೋಮೇಶ್ವರಪುರ ರಸ್ತೆ | 7.80 |
| 26. | ಇಲವಾಲ-ಸಾಗರಕಟ್ಟೆ ರಸ್ತೆಯಿಂದ ಯಲಚಹಳ್ಳಿ ಮೇಗಳಾಪುರ ಮಾರ್ಗವಾಗಿ ರಸ್ತೆ. | 7.00 |
| 27. | ರಾಷ್ಟ್ರೀಯ ಹೆದ್ದಾರಿ 212 ರಿಂದ ಆಲನಹಳ್ಳಿ, ಭುಗತಗಳ್ಳಿ, ವಾಜಮಂಗಲ ಮಾರ್ಗವಾಗಿ ವರಕೋಡು ರಸ್ತೆಯನ್ನು ಸೇರುವ ರಸ್ತೆ. | 8.00 |
| 28. | ಮೈಸೂರು ಹುಣಸೂರು ಮುಖ್ಯ ರಸ್ತೆಯಿಂದ ನಾಗವಾಲ ರಸ್ತೆ. | 3.80 |
| 29. | ಗುಂಗ್ರಾಲ್ ಛತ್ರ - ಕೆ. ನಾಗನಹಳ್ಳಿ ರಸ್ತೆ. | 4.50 |
| 30. | ಕೆ. ಹೆಮ್ಮನಹಳ್ಳಿಯಿಂದ ಹುಯಿಲಾಳು ಮಾರ್ಗ ಇಲವಾಲ, ಅಲೋಕ ರಸ್ತೆ. | 10.00 |
| 31. | ರಾಷ್ಟ್ರೀಯ ಹೆದ್ದಾರಿ 212 ರಿಂದ ಪುಟ್ಟೇಗೌಡನಹುಂಡಿ-ಚಟ್ಟಹಳ್ಳಿ-ಚಟ್ಟಹಳ್ಳಿ ಪಾಳ್ಯ ಮಾರ್ಗವಾಗಿ ತಾಲ್ಲೂಕು ಗಡಿಯವರೆಗೆ. | 5.00 |
| 32. | ಎಂ.ಎಂ. ರಸ್ತೆಯಿಂದ ಮಹದೇವಪುರ, ಬೆಟ್ಟದಬೀಡು ಮಾರ್ಗವಾಗಿ ಗುಮಚನಹಳ್ಳಿ ರಸ್ತೆಯನ್ನು ಸೇರುವ ರಸ್ತೆ | 5.00 |
| 33. | ಜಯಪುರದಿಂದ ಮಾವಿನಹಳ್ಳಿ ಸೇರುವ ರಸ್ತೆ | 2.50 |
| 34. | ಕೆ.ಆರ್.ಎಸ್. ನೇರ ರಸ್ತೆಯಿಂದ ಮಾರ್ಗ ಕೈಗಾರಿಕೆ ಪ್ರದೇಶಕ್ಕೆ ಸೇರುವ ರಸ್ತೆ | 1.20 |
| 35. | ಎಂ.ಬಿ. ರಸ್ತೆಯಿಂದ ಕೆ.ಆರ್.ಎಸ್. ನೇರ ರಸ್ತೆಯಿಂದ ಮಾರ್ಗ ಬೆಳವಾಡಿ | 4.50 |
| 36. | ಎಂ.ಬಿ. ರಸ್ತೆಯಿಂದ ಹೂಟಗಳ್ಳಿಗೆ ಸೇರುವ ರಸ್ತೆ (ಲೂಪ್ ರಸ್ತೆಗಳು) | 1.20 |
| 37. | ಎಂ.ಬಿ. ರಸ್ತೆಯಿಂದ ಎಸ್.ಆರ್.ಎಸ್. ಕಾಲೋನಿ ಮೂಲಕ ಹೂಟಗಳ್ಳಿಗೆ ಸೇರುವ ರಸ್ತೆ (ಲೂಪ್ ರಸ್ತೆಗಳು) | 1.30 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜಿ. ನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ (ಸಂಪರ್ಕ)

ಪಿ.ಆರ್. 1423

## ಕಂದಾಯ ಸಚಿವಾಲಯ

**ವಿಷಯ:** ಮಿತವೇತನ (ಸ್ಟೈಫೆಂಡರಿ) ಗ್ರಾಮಸಹಾಯಕರ ಸೇವೆಯನ್ನು ದಿ.1.7.2006 ರಿಂದ 31.3.2007 ರವರೆಗೆ ಮುಂದುವರೆಸುವ ಕುರಿತು.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ:ಕಂಇ 3 ಎಂ.ವಿ.ಎಸ್.77 ದಿ.16.09.1978
2. ಸರ್ಕಾರದ ಆದೇಶ ಸಂಖ್ಯೆ:ಕಂಇ 82 ಎಂ.ವಿ.ಎಸ್.(1)82, ದಿ.23.09.1982
3. ಸರ್ಕಾರದ ಆದೇಶ ಸಂಖ್ಯೆ:ಕಂಇ 220 ಎಂ.ವಿ.ಎಸ್.91 ದಿ.31.10.1991
4. **ಸರ್ಕಾರದ ಆದೇಶ ಸಂಖ್ಯೆ:ಕಂಇ 258 ಎಂ.ವಿ.ಎಸ್.93 ದಿ.28.1.1994**
5. **ಸರ್ಕಾರದ ಆದೇಶ ಸಂಖ್ಯೆ:ಕಂಇ 201 ಎಂ.ವಿ.ಎಸ್.96 ದಿ.30.10.1996**
6. **ಸರ್ಕಾರದ ಆದೇಶ ಸಂಖ್ಯೆ:ಕಂಇ 109 ಎಂ.ವಿ.ಎಸ್.97 ದಿ.27.03.1997**

7. ಸರ್ಕಾರದ ಆದೇಶ ಸಂಖ್ಯೆ:ಕಂಇ 109 ಎಂ.ವಿ.ಎಸ್.97 ದಿ.31.07.1997
8. ಸರ್ಕಾರದ ಆದೇಶ ಸಂಖ್ಯೆ:ಕಂಇ 109 ಎಂ.ವಿ.ಎಸ್.97 (ಭಾಗ), ದಿ.31.12.1997
9. ಸರ್ಕಾರದ ಆದೇಶ ಸಂಖ್ಯೆ:ಕಂಇ 109 ಎಂ.ವಿ.ಎಸ್.97 (ಭಾಗ), ದಿ.8.07.1998
10. ಸರ್ಕಾರದ ಆದೇಶ ಸಂಖ್ಯೆ:ಕಂಇ 109 ಎಂ.ವಿ.ಎಸ್.97 (ಭಾಗ), ದಿ.6.01.1999
11. ಸರ್ಕಾರದ ಆದೇಶ ಸಂಖ್ಯೆ:ಕಂಇ 109 ಎಂ.ವಿ.ಎಸ್.97 (ಭಾಗ), ದಿ.6.05.1999
12. ಸರ್ಕಾರದ ಆದೇಶ ಸಂಖ್ಯೆ:ಕಂಇ 10 ಬಿ.ಎಸ್.ಸಿ. 2000, ದಿ.16.08.2000
13. ಸರ್ಕಾರದ ಆದೇಶ ಸಂಖ್ಯೆ:ಕಂಇ 250 ಬಿ.ಎಸ್.ಸಿ. 2001, ದಿ.4.12.2001
14. ಸರ್ಕಾರದ ಆದೇಶ ಸಂಖ್ಯೆ:ಕಂಇ 272 ಬಿ.ಎಸ್.ಸಿ. 2002, ದಿ.30.11.2002
15. ಸರ್ಕಾರದ ಆದೇಶ ಸಂಖ್ಯೆ:ಕಂಇ 109 ಬಿ.ಎಸ್.ಸಿ. 2003, ದಿ.28.8.2003
16. ಸರ್ಕಾರದ ಆದೇಶ ಸಂಖ್ಯೆ:ಕಂಇ 109 ಬಿ.ಎಸ್.ಸಿ. 2003, ದಿ.24.7.2004
17. ಸರ್ಕಾರದ ಆದೇಶ ಸಂಖ್ಯೆ:ಕಂಇ 1 ಬಿ.ಎಸ್.ಸಿ. 2005, ದಿ.8.8.2005
18. ಸರ್ಕಾರದ ಆದೇಶ ಸಂಖ್ಯೆ:ಕಂಇ 1 ಬಿಎಸ್.ಸಿ. 2005 ದಿ.24.5.2006

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ (1) ಮತ್ತು (2) ರಲ್ಲಿನ ಆದೇಶಗಳಲ್ಲಿ ಕಂದಾಯ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವ 10450 ಗ್ರಾಮಸಹಾಯಕರನ್ನು ಮಿತವೇತನ (ಸ್ಟೈಫೆಂಡರಿ) ಹುದ್ದೆಗಳ ಆಧಾರದ ಮೇಲೆ 1978ನೇ ಸಾಲಿನಲ್ಲಿ 8941 ಹುದ್ದೆಗಳು, ನಂತರ 1982ನೇ ಸಾಲಿನಲ್ಲಿ 1509 ಹುದ್ದೆಗಳಂತೆ ಮಂಜೂರು ಮಾಡಲಾಗಿದೆ. ನಂತರ ಸದರಿ ಹುದ್ದೆಗಳನ್ನು ಕಾಲಕಾಲಕ್ಕೆ ಮುಂದುವರೆಸಿಕೊಂಡು ಬಂದಿದ್ದು, ಸದರಿ ಗ್ರಾಮಸಹಾಯಕರುಗಳ ಸೇವೆಯ ಅಗತ್ಯತೆಯನ್ನು ಪರಿಗಣಿಸಿ, ಮಾಸಿಕ ನಿಗದಿತ ಸಂಭಾವನೆ ರೂ.1000/-ರ ಮೇರೆಗೆ ಮೇಲೆ ಓದಲಾದ ಕ್ರಮಸಂಖ್ಯೆ:(16)ರಲ್ಲಿನ ಆದೇಶದಲ್ಲಿ ದಿನಾಂಕ:1.4.2004 ರಿಂದ ದಿನಾಂಕ:31.3.2005ರವರೆಗೆ ಮುಂದುವರಿಸಲಾಗಿತ್ತು. ಗ್ರಾಮಸಹಾಯಕ ಹುದ್ದೆಗಳ ಬಗ್ಗೆ ಕಂದಾಯ ಇಲಾಖೆಯಿಂದ ಸಂಪೂರ್ಣ ಅವಲೋಕನೆಗೆ ಒಳಪಟ್ಟು, ಮೇಲೆ ಓದಲಾದ ಕ್ರ.ಸಂ:17ರಲ್ಲಿ ದಿ.1.4.2005 ರಿಂದ ದಿ.31.3.2006 ರವರೆಗೆ (ಒಂದು ವರ್ಷದ ಅವಧಿಗೆ) ಮುಂದುವರೆಸಲು ಮತ್ತು ಅವರುಗಳ ಮಾಸಿಕ ಮಿತವೇತನವನ್ನು ರೂ.1000/- ರಿಂದ ರೂ.2000/- ಗಳವರೆಗೆ ಹೆಚ್ಚಿಸಲು ತೀರ್ಮಾನಿಸಿ ಆದೇಶ ಹೊರಡಿಸಲಾಗಿರುತ್ತದೆ. ಈ ಅವಧಿಯು ದಿ.31.3.06ಕ್ಕೆ ಮುಕ್ತಾಯಗೊಂಡಿದ್ದು, ಗ್ರಾಮಸಹಾಯಕರ ಹುದ್ದೆಗಳನ್ನು ಮುಂದುವರಿಸುವುದು ಅವಶ್ಯಕವಾಗಿರುವುದರಿಂದ ತಾತ್ಕಾಲಿಕವಾಗಿ ಸದರಿ ಹುದ್ದೆಗಳನ್ನು ದಿ.1.4.06 ರಿಂದ 3 ತಿಂಗಳ ಅವಧಿಗೆ ಮುಂದುವರಿಯಲು ಹಾಗೂ ಕರ್ನಾಟಕ ಆಡಳಿತ ಸುಧಾರಣಾ ಆಯೋಗದ ಶಿಫಾರಸ್ಸುಗಳನ್ವಯ ಅಂತಿಮ ತೀರ್ಮಾನ ತೆಗೆದುಕೊಳ್ಳುವ ಷರತ್ತಿಗೆ ಒಳಪಟ್ಟು ಸದರಿ ಗ್ರಾಮಸಹಾಯಕರ ಹುದ್ದೆಗಳನ್ನು ದಿನಾಂಕ:1.4.2006 ರಿಂದ ದಿ.30.6.2006ರವರೆಗೆ ಮೂರು ತಿಂಗಳ ಅವಧಿಗೆ ವಿಸ್ತರಿಸಿ ಮೇಲೆ ಓದಲಾದ (18)ರಲ್ಲಿ ಸರ್ಕಾರದ ಆದೇಶವನ್ನು ಹೊರಡಿಸಲಾಗಿದೆ. ಗ್ರಾಮಸಹಾಯಕರ ಸೇವೆಯ ಅಗತ್ಯತೆಯನ್ನು ಪರಿಗಣಿಸಿ ಸದರಿ ಹುದ್ದೆಗಳನ್ನು ದಿ.31.3.2007 ರವರೆಗೆ ಮುಂದುವರಿಸಲು ತೀರ್ಮಾನಿಸಿ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 1 ಬಿಎಸ್.ಸಿ. 2005, ಬೆಂಗಳೂರು, ದಿನಾಂಕ: 7ನೇ ಅಕ್ಟೋಬರ್ 2006**

ಕಂದಾಯ ಇಲಾಖೆಯಲ್ಲಿರುವ ಒಟ್ಟು 10450 ಮಿತವೇತನ (ಸ್ಟೈಫೆಂಡರಿ) ಗ್ರಾಮಸಹಾಯಕರುಗಳ ಹುದ್ದೆಗಳನ್ನು ಈಗ ನೀಡುತ್ತಿರುವ ಮಾಸಿಕ ಮಿತವೇತನ ರೂ.2000/- (ರೂ.ಎರಡು ಸಾವಿರ ಮಾತ್ರ) ಗಳಂತೆ ದಿನಾಂಕ:1.7.2006 ರಿಂದ ದಿ:31.3.2007ರವರೆಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಲಾಗಿದೆ.

ಮೇಲ್ಕಂಡ ಹುದ್ದೆಗಳನ್ನು ಮುಂದುವರಿಸುವ ಬಗ್ಗೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 2029-00-101-1-01-015 Subsidiary expenses in (SE-I)ರ ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್.ಡಿ. 822 ವೆಚ್ಚ-7/06 ದಿನಾಂಕ:26.09.2006ರಲ್ಲಿ ನೀಡಿದ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಂ. ದೇಸಾಯಿ**

ಪಿ.ಆರ್. 1569

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ, (ಪರಿಹಾರ ಮತ್ತು ಸೇವೆಗಳು-2)

**ವಿಷಯ:** ಎಂ.ಪಿ. ಸೋಮಯ್ಯ, ಹಿಂದಿನ ಉಪ ತಹಶೀಲ್ದಾರ್ ದಾಸನಪುರ ಹೋಬಳಿ, ಬೆಂಗಳೂರು ಉತ್ತರ ತಾಲ್ಲೂಕು ಹಾಲಿ ವಿಶೇಷ ತಹಶೀಲ್ದಾರ್ ಹನೂರು, ಕೊಳ್ಳೇಗಾಲ ತಾಲ್ಲೂಕು ಹಾಗೂ ಶ್ರೀ ಹೆಚ್.ವೈ. ಸುಂದರಯ್ಯ, ಹಿಂದಿನ ಗ್ರಾಮ ಲೆಕ್ಕಿಗರು, ಗಿಡ್ಡೇನಹಳ್ಳಿ ದಾಸನಪುರ ಹೋಬಳಿ, ಬೆಂಗಳೂರು ಉತ್ತರ ತಾಲ್ಲೂಕು ಹಾಲಿ ಗ್ರಾಮಲೆಕ್ಕಿಗರು, ಅಬ್ಬೂರು ವೃತ್ತ, ಚನ್ನಪಟ್ಟಣ ತಾಲ್ಲೂಕು ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ - ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 23 ಎಡಿಇ 2001 ದಿ:14.3.2005.
2. ವಿಚಾರಣಾಧಿಕಾರಿಗಳ ವರದಿ ದಿನಾಂಕ 24.10.2005.
3. ಎರಡನೇ ಕಾರಣ ಕೇಳುವ ನೋಟೀಸ್ ಸಂಖ್ಯೆ:ಆರ್‌ಡಿ 23 ಎಡಿಇ 2001 ದಿನಾಂಕ:20.12.2005.
4. ಶ್ರೀ ಎಂ.ಪಿ. ಸೋಮಯ್ಯ, ವಿಶೇಷ ತಹಶೀಲ್ದಾರ್ ಇವರ ಲಿಖಿತ ಸಮಜಾಯಿಷಿ ದಿನಾಂಕ 6.1.2006.
5. **ಶ್ರೀ ಹೆಚ್.ವೈ. ಸುಂದರಯ್ಯ, ಗ್ರಾಮ ಲೆಕ್ಕಿಗರು ಇವರ ಲಿಖಿತ ಸಮಜಾಯಿಸಿ ದಿನಾಂಕ 27.3.2006.**
6. **ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ ಪಿಎಸ್‌ಸಿ 74 ಸಿಎನ್‌ಎಸ್ 06 ದಿನಾಂಕ 11.8.2006.**
7. **ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ 89 ಸಿಎನ್‌ಎಸ್ 06 ದಿನಾಂಕ:15.9.2006.**

**ಪ್ರಸ್ತಾವನೆ:**

ಶ್ರೀ ಎಂ.ಪಿ. ಸೋಮಯ್ಯ, ವಿಶೇಷ ತಹಶೀಲ್ದಾರ್, ಹನೂರ್ ಕೊಳ್ಳೇಗಾಲ ತಾಲ್ಲೂಕು ಇವರು ಈ ಹಿಂದೆ 1998-99ನೇ ಸಾಲಿನಲ್ಲಿ ಬೆಂಗಳೂರು ಉತ್ತರ ತಾಲ್ಲೂಕು ದಾಸನಪುರ ಹೋಬಳಿಯಲ್ಲಿ ಉಪ ತಹಶೀಲ್ದಾರರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಶ್ರೀ ಹೆಚ್.ವೈ. ಸುಂದರಯ್ಯ, ಗ್ರಾಮ ಲೆಕ್ಕಿಗ, ಗಿಡ್ಡೇನಹಳ್ಳಿ ಮತ್ತು ಬೆಂಗಳೂರು ಉತ್ತರ ತಾಲ್ಲೂಕು ಇವರ ಜೊತೆ ಸೇರಿ ಗಿಡ್ಡೇನಹಳ್ಳಿ ಗ್ರಾಮದ ಸ.ನಂ.80ರಲ್ಲಿನ ಸರ್ಕಾರದ ಗೋಮಾಳದ ಜಮೀನಿಗೆ ಯಾವುದೇ ಅಧಿಕೃತ ದಾಖಲೆ/ಆದೇಶಗಳು ಇಲ್ಲದಿದ್ದರೂ ಸಹ ಅಕ್ರಮವಾಗಿ ಈ ಕೆಳಕಂಡ 3 ಜನರ ಹೆಸರಿನಲ್ಲಿ ಮ್ಯುಟೇಷನನ್ನು ಅಂಗೀಕರಿಸಿರುತ್ತಾರೆ.

| ಕ್ರ. ಸಂ. | ಹೆಸರು | ಸರ್ವೆ ನಂ. | ವಿಸ್ತೀರ್ಣ | ಎಂಆರ್ ಸಂಖ್ಯೆ |
|---|---|---|---|---|
| 1. | ಶ್ರೀಮತಿ ಜಯಮ್ಮ ಬಿನ್ ಕೆಂಪೇಗೌಡ | 80 | 5.00 | 1/88.89 |
| 2. | ಶ್ರೀ ಬಿ. ಬೈರಪ್ಪ ಬಿನ್ ಗಂಗಬೈರಯ್ಯ | 80 | 5.00 | 2/88.89 |
| 3. | ಶ್ರೀ ಗಂಗಬೈರಯ್ಯ ಬಿನ್ ಚಿಕ್ಕನರಸಯ್ಯ | 80 | 5.00 | 3/88.89 |

ಸರ್ಕಾರಿ ಜಮೀನನ್ನು ರಕ್ಷಿಸದೆ ಅಧಿಕೃತ ದಾಖಲೆ/ಆದೇಶಗಳು ಇಲ್ಲವಾದರೂ ಅಕ್ರಮವಾಗಿ ಮೇಲಿನಂತೆ ಖಾತೆಯನ್ನು ಅಂಗೀಕರಿಸಿ ಸರ್ಕಾರದ ಬೆಲೆಬಾಳುವ ಜಮೀನನ್ನು ಅನಧಿಕೃತವಾಗಿ ಪರಬಾರೆ ಮಾಡಿ ಸರ್ಕಾರಕ್ಕೆ ನಷ್ಟ ಉಂಟು ಮಾಡಿರುವ ಆರೋಪದ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಶ್ರೀ ಎ.ಪಿ. ಸೋಮಯ್ಯ, ವಿಶೇಷ ತಹಶೀಲ್ದಾರ್, ಹನೂರು, ಕೊಳ್ಳೇಗಾಲ ತಾಲ್ಲೂಕು ಮತ್ತು ಶ್ರೀ ಹೆಚ್.ವೈ. ಸುಂದರಯ್ಯ, ಹಿಂದಿನ ಗ್ರಾಮ ಲೆಕ್ಕಿಗ ಬೆಂಗಳೂರು ಉತ್ತರ ತಾಲ್ಲೂಕು ಇವರುಗಳ ವಿರುದ್ಧ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 13 ರಡಿಯಲ್ಲಿ ಇಲಾಖಾ ವಿಚಾರಣೆ ನಡೆಸಲು ಮೇಲೆ ಓದಲಾದ ಕ್ರ.ಸಂ. (1)ರ ಆದೇಶದಲ್ಲಿ ದಿನಾಂಕ: 14.3.2005ರಲ್ಲಿ ವಿಚಾರಣಾಧಿಕಾರಿಗಳನ್ನು ನೇಮಕ ಮಾಡಲಾಗಿತ್ತು.

ಈ ಪ್ರಕರಣದ ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ ಕ್ರ .ಸಂ. (2)ರಂತೆ ದಿನಾಂಕ 24.10.2005ರಲ್ಲಿ ವಿಚಾರಣಾ ವರದಿ ಮತ್ತು ವಿಚಾರಣಾ ದಾಖಲೆಗಳನ್ನು ಸಲ್ಲಿಸಿರುತ್ತಾರೆ. ಆರೋಪಿತ ಅಧಿಕಾರಿ/ನೌಕರರ ವಾದ ಸಾಕ್ಷಿದಾರರ ಹೇಳಿಕೆ, ಮಂಡನಾಧಿಕಾರಿಯವರ ವಾದ ಆರೋಪಿತ ಅಧಿಕಾರಿ/ನೌಕರರ ಮತ್ತು ಮಂಡನಾಧಿಕಾರಿಯವರ ಲಿಖಿತ ಹೇಳಿಕೆಯನ್ನು ಪರಿಶೀಲಿಸಿರುವ ವಿಚಾರಣಾಧಿಕಾರಿಗಳು ಆರೋಪಿತ ಅಧಿಕಾರಿ/ನೌಕರರ ಮೇಲೆ ಹೊರಿಸಲಾದ ಆರೋಪಗಳು ಸಾಬೀತು ಆಗಿರುತ್ತವೆ ಎಂದು ವರದಿ ನೀಡಿರುತ್ತಾರೆ.

ವಿಚಾರಣಾಧಿಕಾರಿಗಳ ವರದಿ ವಿಚಾರಣಾ ಕಡತ/ದಾಖಲೆಗಳನ್ನು ಪರಿಶೀಲಿಸಿ, ಆರೋಪಿತ ಅಧಿಕಾರಿಯಾದ ಶ್ರೀ ಎಂ.ಪಿ. ಸೋಮಯ್ಯ, ವಿಶೇಷ ತಹಶೀಲ್ದಾರ್ ಹಾಗೂ ಶ್ರೀ ಹೆಚ್.ವೈ. ಸುಂದರಯ್ಯ ಗ್ರಾಮ ಲೆಕ್ಕಿಗರು ಇವರುಗಳಿಗೆ ವಿಚಾರಣಾಧಿಕಾರಿಗಳ ವರದಿಯ ಪ್ರತಿಯನ್ನು ನೀಡಿ ವಿಚಾರಣಾ ಅಧಿಕಾರಿಗಳ ನಿರ್ಣಯವನ್ನು ಒಪ್ಪಿಕೊಂಡು ಕ.ನಾ.ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8ರಲ್ಲಿಯ ಯಾವುದಾದರೂ ಒಂದು ದಂಡನೆಯನ್ನು ವಿಧಿಸಲು ಉದ್ದೇಶಿಸಿರುವುದನ್ನು ತಿಳಿಸಿ ಆ ಬಗ್ಗೆ ಅವರ ಸಮಜಾಯಿಸಿ ಏನಾದರೂ ಇದ್ದರೆ ನೋಟೀಸ್ ತಲುಪಿದ 10 ದಿನಗಳೊಳಗಾಗಿ ಸಮಜಾಯಿಷಿಯನ್ನು ಸಲ್ಲಿಸಲು ಸೂಚಿಸಿ ಮೇಲೆ ಕ್ರಸಂ. (3)ರಂತೆ ದಿನಾಂಕ:20.12.2005ರ ಎರಡನೆ ಕಾರಣ ಕೇಳುವ ನೋಟೀಸ್ ನೀಡಲಾಗಿತ್ತು. ಇದಕ್ಕೆ ಉತ್ತರವಾಗಿ ಶ್ರೀ ಎಂ.ಪಿ. ಸೋಮಯ್ಯ, ವಿಶೇಷ ತಹಶೀಲ್ದಾರ್‌ರವರು ಕ್ರ.ಸಂ.(4)ಂತೆ ದಿ:6.1.2006ರಂದು ಲಿಖಿತ ಉತ್ತರ ಸಲ್ಲಿಸಿ ತಮ್ಮ ಮೇಲಿನ ಆರೋಪವನ್ನು ಅಲ್ಲಗಳೆದು ವಿಚಾರಣಾ ಸಮಯದಲ್ಲಿ ನೀಡಿರುವ ತನ್ನ ಸಮಜಾಯಿಷಿಯನ್ನು ಪರಿಗಣಿಸಿ ತನ್ನನ್ನು ಆರೋಪ ಮುಕ್ತರನ್ನಾಗಿಸಲು ಕೋರಿರುತ್ತಾರೆ. ಮೇಲೆ ಕ್ರ.ಸಂ. (5)ರಂತೆ ಶ್ರೀ ಹೆಚ್.ವೈ. ಸುಂದರಯ್ಯನವರು ಸಲ್ಲಿಸಿರುವ ಲಿಖಿತ ಹೇಳಿಕೆ ದಿ:27.3.2006ರಲ್ಲಿ ಸರ್ಕಾರದಲ್ಲಿ ಸ್ವೀಕೃತವಾಗಿದ್ದು, ತಮ್ಮ ಮೇಲಿನ ಆರೋಪವನ್ನು ಅಲ್ಲಗಳೆದು ತನ್ನನ್ನು ಆರೋಪ ಮುಕ್ತರನ್ನಾಗಿಸಲು ಕೋರಿರುತ್ತಾರೆ.

ವಿಚಾರಣಾಧಿಕಾರಿಗಳ ವರದಿ ವಿಚಾರಣಾ ಕಡತ/ದಾಖಲೆ ಎರಡನೇ ಕಾರಣ ಕೇಳುವ ನೋಟೀಸಿಗೆ ಆಪಾದಿತ ಅಧಿಕಾರಿಯಾದ ಶ್ರೀ ಎಂ.ಪಿ. ಸೋಮಯ್ಯ ಮತ್ತು ಶ್ರೀ ಹೆಚ್.ವೈ. ಸುಂದರಯ್ಯ, ಗ್ರಾಮಲೆಕ್ಕಿಗರವರುಗಳು ಸಲ್ಲಿಸಿದ ಲಿಖಿತ ಹೇಳಿಕೆಗಳಲ್ಲಿನ ಅಂಶಗಳನ್ನು ಪರಿಶೀಲಿಸಿ ಬೆಲೆಬಾಳುವ ಸರ್ಕಾರಿ ಜಮೀನನ್ನು ಖೋಟಾ ದಾಖಲೆಗಳ ಆಧಾರದ ಮೇಲೆ ಅಕ್ರಮವಾಗಿ ಮ್ಯುಟೇಷನ್ ಅಂಗೀಕರಿಸಿ ಖಾತೆಯನ್ನು ಖಾಸಗಿ ವ್ಯಕ್ತಿಗಳಿಗೆ ಮಾಡಿರುವುದು ಗುರುತರವಾದ ಆರೋಪವಾಗಿದ್ದರ ಹಿನ್ನೆಲೆಯಲ್ಲಿ ಕ.ನಾ.ಸೇ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8 (viii)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಂ.ಪಿ. ಸೋಮಯ್ಯ ಮತ್ತು ಶ್ರೀ ಹೆಚ್.ವೈ. ಸುಂದರಯ್ಯ, ಗ್ರಾಮಲೆಕ್ಕಿಗರವರುಗಳನ್ನು ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸುವ ಬಗ್ಗೆ ಆಡಳಿತ ಇಲಾಖೆಯು ನಿರ್ಧರಿಸಿ ಕರ್ನಾಟಕ ಲೋಕ ಸೇವಾ ಆಯೋಗದ (consultation) ರೆಗ್ಯುಲೇಷನ್ 2000ದ 5(1)(b) ರನ್ವಯ ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿ ಕೋರಲಾಗಿತ್ತು. ಕ್ರ.ಸಂ. (6) ಮತ್ತು (7)ರಲ್ಲಿ ಓದಲಾದ ಪತ್ರಗಳಲ್ಲಿ ಕರ್ನಾಟಕ ಲೋಕಸೇವಾ ಆಯೋಗವು ಶ್ರೀ ಎಂ.ಪಿ. ಸೋಮಯ್ಯ ವಿಶೇಷ, ತಹಶೀಲ್ದಾರ್ ಮತ್ತು ಶ್ರೀ ಹೆಚ್.ವೈ. ಸುಂದರಯ್ಯ, ಗ್ರಾಮ ಲೆಕ್ಕಿಗರು ಇವರನ್ನು ಸೇವೆಯಿಂದ ವಜಾ ಮಾಡುವ ಸರ್ಕಾರದ ನಿರ್ಧಾರಕ್ಕೆ ಸಹಮತಿ ನೀಡಿರುತ್ತದೆ.

ಸರ್ಕಾರವು ಈ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಶ್ರೀ ಎಂ.ಪಿ. ಸೋಮಯ್ಯ, ವಿಶೇಷ ತಹಶೀಲ್ದಾರ್ ಹನೂರು, ಕೊಳ್ಳೇಗಾಲ ತಾಲ್ಲೂಕು ಹಾಗೂ ಶ್ರೀ ಹೆಚ್.ವೈ. ಸುಂದರಯ್ಯ, ಗ್ರಾಮ ಲೆಕ್ಕಿಗರು ಅಬ್ಬೂರು ವೃತ್ತ ಚೆನ್ನಪಟ್ಟಣ ತಾಲ್ಲೂಕು ಇವರುಗಳನ್ನು ಸೇವೆಯಿಂದ ವಜಾಗೊಳಿಸುವ ದಂಡನೆಯನ್ನು ವಿಧಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 23 ಎಡಿಇ 2001, ಬೆಂಗಳೂರು, ದಿನಾಂಕ: 22ನೇ ಸೆಪ್ಟೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 8 (viii) ರನ್ವಯ ಶ್ರೀ ಎಂ.ಪಿ. ಸೋಮಯ್ಯ, ಹಿಂದಿನ ಉಪ ತಹಶೀಲ್ದಾರ್ ದಾಸನಪುರ ಹೋಬಳಿ, ಬೆಂಗಳೂರು ಉತ್ತರ ತಾಲ್ಲೂಕು ಹಾಲಿ ವಿಶೇಷ ತಹಶೀಲ್ದಾರ್ ಹನೂಲು ಕೊಳ್ಳೇಗಾಲ ತಾಲ್ಲೂಕು ಚಾಮರಾಜನಗರ ಜಿಲ್ಲೆ ಹಾಗೂ ಶ್ರೀ ಹೆಚ್.ವೈ. ಸುಂದರಯ್ಯ, ಹಿಂದಿನ ಗ್ರಾಮ ಲೆಕ್ಕಿಗರು, ಗಿಡ್ಡೇನಹಳ್ಳಿ ವೃತ್ತ, ದಾಸನಪುರ ಹೋಬಳಿ, ಬೆಂಗಳೂರು ಉತ್ತರ ತಾಲ್ಲೂಕು ಹಾಲಿ ಗ್ರಾಮಲೆಕ್ಕಿಗರು, ಅಬ್ಬೂರು ವೃತ್ತ, ಚೆನ್ನಪಟ್ಟಣ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರುಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾಗೊಳಿಸಿ ಆದೇಶಿಸಿದೆ.

**ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,**

**ಆರ್. ಶ್ರೀಮತಿ ಚಂದ್ರಶೇಖರ್**

**ಪಿ.ಆರ್. 1426**

**ಸರ್ಕಾರದ ಅಧೀನ ಕಾರ್ಯದರ್ಶಿ,**

**ಕಂದಾಯ ಇಲಾಖೆ, (ಸೇ-3)**

**ವಿಷಯ:** ಶ್ರೀ ಜೆ. ನಂಜುಂಡೇಶ್ವರ್, ಹಿಂದಿನ ಆಹಾರ ಶಿರಸ್ತೇದಾರ್, ಚನ್ನಗಿರಿ ತಾಲ್ಲೂಕು ಹಾಲಿ ತಹಶೀಲ್ದಾರ್ ಗುಬ್ಬಿ ಇವರ ವಿರುದ್ಧ ದಾಖಲಾದ ಲೋಕಾಯುಕ್ತ ಟ್ರಾಪ್ ಪ್ರಕರಣದಲ್ಲಿ ನ್ಯಾಯಾಲಯವು ತಪ್ಪಿತಸ್ತರೆಂದು ತೀರ್ಮಾನಿಸಿರುವುದರಿಂದ ಇವರನ್ನು ಸೇವೆಯಿಂದ ವಜಾಗೊಳಿಸುವ ಬಗ್ಗೆ.

**ಓದಲಾಗಿದೆ:**

1. ಪೊಲೀಸ್ ಮಹಾ ನಿರೀಕ್ಷಕರು ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಪತ್ರ ಸಂಖ್ಯೆ:ಎಲ್ಒಕೆ/ಐಎಸ್ವಿ(ಜಿ)/ಬಿ-25/ಸಿಆರ್-3/93/ಡಿವಿಜಿ ದಿನಾಂಕ 1.5.2005.
2. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್ಸಿ 91 ಸಿಎಸ್ಎಸ್ 05 ದಿನಾಂಕ:5.9.2005.

ಶ್ರೀ ಜೆ. ನಂಜುಂಡೇಶ್ವರ್, ಹಿಂದಿನ ಆಹಾರ ಶಿರಸ್ತೇದಾರ್, ಚನ್ನಗಿರಿ ತಾಲ್ಲೂಕು, ಪ್ರಸ್ತುತ ತಹಸೀಲ್ದಾರ್ ಗುಂಪು-ಬಿ (ನಿಯಮ-32) ಹಾಗೂ ಶ್ರೀ ಎಂ.ಆರ್. ಭೀಮಪ್ಪ, ಹಿಂದಿನ ಆಹಾರ ನಿರೀಕ್ಷಕರು ಇವರುಗಳು ವೀರಭದ್ರಸ್ವಾಮಿ ಸೀಮೆಎಣೆ ವಿತರಕರಿಗೆ ಸೀಮೆಎಣ್ಣೆ ಹಂಚಿಕೆ ನೀಡುವಾಗ ಒತ್ತಾಯಪೂರ್ವಕವಾಗಿ ರೂ.250-00 ಗಳ ಅಕ್ರಮ ಸಂಭಾವನೆಯನ್ನು ದಿನಾಂಕ:29.6.1994ರಂದು ಪಡೆದಿದ್ದರೆಂಬ ಆರೋಪದ ಹಿನ್ನೆಲೆಯಲ್ಲಿ ಇಲಾಖಾ ವಿಚಾರಣೆ ನಡೆಸುವಂತೆ ಉಪ ಲೋಕಾಯುಕ್ತರು ಸರ್ಕಾರಕ್ಕೆ ಶಿಫಾರಸ್ಸು ಮಾಡಿದ್ದರ ಮೇರೆಗೆ ಆಹಾರ ನಾಗರೀಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆಯು ದಿನಾಂಕ:24.2.1997ರ ಆದೇಶ ಸಂಖ್ಯೆ: ಎಫ್ಸಿಎಸ್ 199 ಇಎಫ್‌ಟಿ 96 ರಲ್ಲಿ ಕರ್ನಾಟಕ ಗೌರಾವಾನ್ವಿತ ಲೋಕಾಯುಕ್ತರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 14 A(2)(ಬಿ)ರನ್ವಯ ಇಲಾಖಾ ವಿಚಾರಣೆ ನಡೆಸುವಂತೆ ವಹಿಸಿತ್ತು. ಮಾನ್ಯ ಕರ್ನಾಟಕ ಉಪ ಲೋಕಾಯುಕ್ತರವರು ಉಪ ನಿಬಂಧಕರು, ವಿಚಾರಣೆ-3 ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ವಿಚಾರಣಾ ವರದಿಯನ್ನು ಸಲ್ಲಿಸುವಂತೆ ಆದೇಶಿಸಿದ್ದ ಹಿನ್ನೆಲೆಯಲ್ಲಿ ಈ ಪ್ರಕರಣದಲ್ಲಿ ಇಲಾಖಾ ವಿಚಾರಣೆ ನಡೆಸಿ ಆರೋಪಗಳು ಸಾಬೀತಾಗಿರುವುದಿಲ್ಲವೆಂದು ತಮ್ಮ ವಿಚಾರಣಾ ವರದಿಯಲ್ಲಿ ತಿಳಿಸಿದ್ದರ ಹಿನ್ನೆಲೆಯಲ್ಲಿ ವರುಗಳನ್ನು ಆಪಾದನೆಗಳಿಂದ ದೋಷಮುಕ್ತರನ್ನಾಗಿ ಮಾಡಿ ಸರ್ಕಾರದ ಆದೇಶ ಸಂಖ್ಯೆ: ಅನಾಸ 199 ಇಎಫ್‌ಟಿ 96, ಬೆಂಗಳೂರು, ದಿನಾಂಕ: 17.8.2001ರಲ್ಲಿ ಆಹಾರ ನಾಗರೀಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆ ಆದೇಶಿಸಿದೆ.

ಶ್ರೀ ಜೆ. ನಂಜುಂಡೇಶ್ವರ್, ಹಿಂದಿನ ಆಹಾರ ಶಿರಸ್ತೇದಾರ್, ಚನ್ನಗಿರಿ ತಾಲ್ಲೂಕು ಪ್ರಸ್ತುತ ತಹಶೀಲ್ದಾರ್, ಇವರಿಗೆ ಲಂಚ ಸ್ವೀಕಾರ ಆರೋಪ ಸಾಬೀತಾದ ಹಿನ್ನೆಲೆಯಲ್ಲಿ ದಾವಣಗೆರೆ ಜಿಲ್ಲಾ ಹಾಗೂ ಸತ್ರ ನ್ಯಾಯಾಲಯವು 5 ವರ್ಷಗಳ ಕಾರಾಗೃಹ ವಾಸ ಹಾಗೂ 25,000/- ರೂ.ಗಳ ದಂಡವನ್ನು ವಿಧಿಸಿ ದಿನಾಂಕ: 28.3.2005 ರಂದು ತೀರ್ಪನ್ನು ನೀಡಿದೆ. ಈ ಪ್ರಕರಣಕ್ಕೆ ಸಂಬಂಧಿಸಿದಂತೆ ನ್ಯಾಯಾಲಯ ಆದೇಶದ ತೀರ್ಪಿನ ಉದ್ಧೃತ ಭಾಗ ಈ ಕೆಳಗಿನಂತಿದೆ:

**ORDER**

The accused No.1 and 2 are convicted for an offence punishable U/s.7 of the Prevention of Corruption Act and sentenced to undergo rigorous imprisonment for 1 year and they are also liable to pay a fine of Rs.10,000/- each or in default to undergo further imprisonment for 2 months more.

They are also convicted for an offence punishable U/s. 13(1)(d) r/w 13(2) of the Prevention of Corruption Act and sentenced to undergo rigorous imprisonment for 4 years and they are also liable to pay a fine of Rs.15,000/- each or in default to undergo further imprisonment for 6 months more.

It is further ordered that both the sentences shall run concurrently with each other.

It is further ordered U/s.428 of the Criminal Procedure Code that the period of detention if any during the pendency of the matter or during investigation shall be given set off.

It is further ordered that the amount seized in this matter i.e., M.O.6 shall be deposited to the account of the Lokayuktha after proper verification and the other M.Os. i.e. M.O.1 to 5 shall be destroyed as they are valueless after the appeal time is over.

Issue conviction warrant accordingly against the accused.

Ordered accordingly.

Special Judge Davanagere

ಮೇಲ್ಕಂಡ ಆದೇಶದ ವಿರುದ್ಧ ದಿನಾಂಕ:4.4.2005 ರಂದು ಕರ್ನಾಟಕ ಉಚ್ಚ ನ್ಯಾಯಾಲಯವು ಸದರಿ ಆರೋಪಿತ ಅಧಿಕಾರಿಯು ಸಲ್ಲಿಸಿದ್ದ ಕ್ರಿಮಿನಲ್ ಅಪೀಲ್ ಸಂಖ್ಯೆ:570/2005ರಲ್ಲಿ ಮೇಲೆ ತಿಳಿಸಿದ ದಿನಾಂಕ:28.3.2005ರ ದಾವಣಗೆರೆ ಜಿಲ್ಲಾ ನ್ಯಾಯಾಧೀಶರ ಆದೇಶವನ್ನು ಅಮಾನತ್ತಿನಲ್ಲಿರಿಸಿದೆ. ಸದರಿ ಆದೇಶದ ಉದ್ಧೃತ ಭಾಗ ಈ ಕೆಳಗಿನಂತಿದೆ:

**ORDER**

Aditional S.P.P. take notice.

Heard admit

I.A. I/05 is an application for suspension of sentence passed in SPL.LOPK.C.No. 16/2000 by the District & Session judge, Davanagere dated 28.3.2005 convicting the accused for the offence Under Section 7 and 13(1) (d) read with section 13(2) of the Prevention of Corruption Act, 1988.

Considering the facts of the case and also the sentence imposed II feel that it is a fit case to suspend the sentence until further orders, subject to the condition that the appellants/accused depositing the fine amount as ordered by the Trial Court within a period of four weeks from today, if not deposited.

The accused are enlarged on bail on their execution of a self-bond for a sum of Rs.10,000/- each with one surety for the like sum to the satisfaction of the Trail Court. Call for records.

Judge

ಸಿಆಸು ಇಲಾಖೆಯ ಹೊರಡಿಸಿರುವ ಸುತ್ತೋಲೆ ಸಂಖ್ಯೆ: ಸಿಆಸುಇ 9 ಸೇಇವಿ 95 ದಿನಾಂಕ:26.6.96 ಹಾಗೂ ಸಿಆಸುಇ 08 ಸೇಇವಿ 2000, ದಿನಾಂಕ: 29.8.2000ರ ಸುತ್ತೋಲೆಗಳಲ್ಲಿ ಇಂತಹ ಪ್ರಕರಣಗಳಲ್ಲಿ ಸರ್ಕಾರಿ ನೌಕರರ ವಿರುದ್ಧ ಯಾವ ರೀತಿ ಕ್ರಮ ಜರುಗಿಸಬಹುದು ಎಂಬ ಬಗ್ಗೆ ಸೂಕ್ತ ಮಾರ್ಗದರ್ಶನ ನೀಡಿದೆ. ದಿನಾಂಕ:26.6.96ರ ಸುತ್ತೋಲೆಯಲ್ಲಿ ಕಂಡಿಕೆ 3 ರಲ್ಲಿ ಈ ಕೆಳಗಿನಂತೆ ಸ್ಪಷ್ಟಪಡಿಸಿದೆ.

ಸಂವಿಧಾನದ ಅನುಚ್ಛೇದ 311(2) ರಡಿಯಲ್ಲಿನ ಎರಡನೇ ಪರಂತುಕದ ಖಂಡ (Clause) (ಎ)ಯು "ಕ್ರಿಮಿನಲ್ ಆರೋಪದ ಮೇಲೆ ದೋಷಸಿದ್ದಿಯಾಗುವಂತೆ ಮಾಡಿದ ನಡತೆಯ ಬಗ್ಗೆ ಹೇಳುತ್ತದೆಯಾದ್ದರಿಂದ ದೋಷಸಿದ್ದಿಯಾಗಿರುವುದನ್ನು ನಿಲಂಬನೆಯಲ್ಲಿಡುವ ಪ್ರಶ್ನೆ ಉದ್ಭವಿಸುವುದಿಲ್ಲ.

ಆದ್ದರಿಂದ, ಆಪಾದಿತ ಸರ್ಕಾರಿ ನೌಕರನು ಕ್ರಿಮಿನಲ್ ನ್ಯಾಯಾಲಯದ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಿದ್ದಾನೆ ಅಥವಾ ಇತರ ವ್ಯವಹರಣೆ ಹೂಡಿದ್ದಾನೆ; ಅಥವಾ ಮೇಲಿನ ನ್ಯಾಯಾಲಯವು ಕ್ರಿಮಿನಲ್ ನ್ಯಾಯಾಲಯದ ದಂಡನೆ ಆದೇಶವನ್ನು ನಿಲಂಬನೆಯಲ್ಲಿಟ್ಟಿದೆ, ಅಥವಾ ಆತನ ಮೇಲ್ಮನವಿ ಇತ್ಯರ್ಥದಲ್ಲಿರುವಾಗ ಜಾಮೀನಿನ ಮೇಲೆ ಬಿಡುಗಡೆ ಪಡೆದಿದ್ದಾನೆ" ಎಂಬ ಕಾರಣಕ್ಕಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮ 1957ರ ನಿಯಮ 14(i) ರನುಸಾರ ಕ್ರಮ ಜರುಗಿಸುವುದನ್ನು ತಡೆಹಿಡಿಯಬೇಕಾದ ಅಗತ್ಯವಿಲ್ಲ. ಇಂತಹ ಎಲ್ಲಾ ಸಂದರ್ಭಗಳಲ್ಲಿ ಸೂಕ್ತವಾದ ಕ್ರಮ ಎಂದರೆ, ಒಮ್ಮೆ ಒಬ್ಬ ಸರ್ಕಾರಿ ನೌಕರನು ಕ್ರಿಮಿನಲ್ ನ್ಯಾಯಾಲಯದ ದಂಡನೆಗೆ ಗುರಿಯಾದರೆ, ಆತನು ಸಲ್ಲಿಸಬಹುದಾದ ಮೇಲ್ಮನವಿ ಇತ್ಯರ್ಥವಾಗುವವರೆಗೂ ಕಾಯದೆ ಸಂವಿಧಾನದ ಅನುಚ್ಛೇದ 311(2) ರಡಿಯಲ್ಲಿರುವ ಎರಡನೇ ಪರಂತುಕದ ಸಮರ್ಥನೆ ಪಡೆದಿರುವ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 14(i) ರ ಅನುಸಾರ ಶಿಸ್ತಿನ ಕ್ರಮ ಕೈಗೊಳ್ಳತಕ್ಕದ್ದು. ಇಲ್ಲವಾದಲ್ಲಿ, ಕ್ರಿಮಿನಲ್ ನ್ಯಾಯಾಲಯದಲ್ಲಿ ತೀವ್ರ ಆರೋಪಕ್ಕಾಗಿ ದೋಷಸಿದ್ದಿಯಾಗಿ ದಂಡನೆಗೆ ಗುರಿಯಾದಂತಹ ವ್ಯಕ್ತಿಯು ಸೇವೆಯಲ್ಲಿ ಮುಂದುವರಿಯಲು ಅವಕಾಶ ಕಲ್ಪಿಸಿದಂತಾಗುತ್ತದೆ. ಆದ್ದರಿಂದ, ಮೇಲ್ಮನವಿ ಆದೇಶವು ಇತ್ಯರ್ಥವಾಗುವುದನ್ನು ಕಾಯುವುದು ಸೂಕ್ತವಲ್ಲ. ಆದರೆ, ಒಂದು ವೇಳೆ ಆಪಾದಿತ ಸರ್ಕಾರಿ ನೌಕರರು ಮೇಲಿನ ನ್ಯಾಯಾಲಯದಲ್ಲಿ ಖುಲಾಸೆ (acquit) ಯಾದರೆ, ಶಿಸ್ತು ಪ್ರಾಧಿಕಾರಿಯು ಆದೇಶವನ್ನು ಪರಿಷ್ಕರಿಸಬಹುದು. ಒಂದು ವೇಳೆ ಸರ್ಕಾರಿ ನೌಕರರನ್ನು ಪುನಃ ಸೇವೆಗೆ ತೆಗೆದುಕೊಂಡಲ್ಲಿ, ಆತನು ಸೇವೆಯಲ್ಲಿ ಮುಂದುವರಿದಿದ್ದರೆ ಅರ್ಹನಾಗಿರುತ್ತಿದ್ದಂಥ ಎಲ್ಲ ಸೌಲಭ್ಯಗಳಿಗೂ ಹಕ್ಕುಳ್ಳವನಾಗುತ್ತಾನೆ.

ಮೇಲ್ಕಂಡ ಸಂದರ್ಭ ಹಾಗೂ ವಿಶೇಷ ನ್ಯಾಯಾಲಯವು ಆಪಾದಿತ ಅಧಿಕಾರಿಗೆ ವಿಧಿಸಿರುವ ಸಜೆ ಮತ್ತು ದಂಡನೆಯ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 14(i) ರ ಅನುಸಾರ ನಿಯಮ 8(viii ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಜೆ. ನಂಜುಂಡೇಶ್ವರ್, ಪ್ರಸ್ತುತ ತಹಸೀಲ್ದಾರ್ ಇವರಿಗೆ ಸೇವೆಯಿಂದ ವಜಾ ದಂಡನೆ ವಿಧಿಸುವ ಬಗ್ಗೆ ಆಡಳಿತ ಇಲಾಖೆಯು ನಿರ್ಧರಿಸಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿ ಕೋರಲಾಗಿತ್ತು. ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ 5.9.2005ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗವು ಕೆಳಕಂಡಂತೆ ಸಹಮತಿ ನೀಡಿರುತ್ತದೆ.

"ಉಲ್ಲೇಖಿತ ಪ್ರಕರಣವನ್ನು ಆಯೋಗವು ಕೂಲಂಕಷವಾಗಿ ಪರಿಶೀಲಿಸಿ, ಶ್ರೀ ಜೆ. ನಂಜುಂಡೇಶ್ವರ್ ಹಿಂದಿನ ಆಹಾರ ಶಿರಸ್ತೇದಾರ್ (ಪ್ರಸ್ತುತ ತಹಶೀಲ್ದಾರ್), ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957 ನಿಯಮ 8(viii)ಕ್ಕೆ ಬದಲಾಗಿ ಅದೇ ನಿಯಮಾವಳಿಗಳ ನಿಯಮ 14(1)ರಡಿಯಲ್ಲಿ ಸೇವೆಯಿಂದ ವಜಾಗೊಳಿಸಲು ಸಹಮತಿಸಿದೆಯೆಂದು ತಿಳಿಸಲು ನಿರ್ದೇಶಿತನಾಗಿದ್ದೇನೆ".

ಶ್ರೀ ಎಂ.ಆರ್. ಭೀಮಪ್ಪ ಮತ್ತು ಶ್ರೀ ಜೆ. ನಂಜುಂಡೇಶ್ವರ್ ರವರು ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಅಜಿ ಸಂಖ್ಯೆ 6879 ಮತ್ತು 6880/2005ನ್ನು ಸಲ್ಲಿಸಿ, ಶ್ರೀ ಜೆ. ನಂಜುಂಡೇಶ್ವರ್ ರವರನ್ನು ಕೂಡಲೇ ವಜಾ ಮಾಡಲು ಶಿಫಾರಸ್ಸು ಮಾಡಿರುವ ಕರ್ನಾಟಕ ಲೋಕಾಯುಕ್ತ ಪತ್ರವನ್ನು ತಳ್ಳಿ ಹಾಕಲು (quash) ಕೋರಿದ್ದು, ಕರ್ನಾಟಕ ಆಡಳಿತ ನ್ಯಾಯಮಂಡಳಿಯು ದಿನಾಂಕ 31.8.05ರ ತನ್ನ Interim Order ನಲ್ಲಿ, ಶ್ರೀ ಜೆ. ನಂಜುಂಡೇಶ್ವರ್ ರವರನ್ನು ವಜಾ ಮಾಡಲು ಶಿಫಾರಸ್ಸು ಮಾಡಿರುವ ಪತ್ರ ಸಂಖ್ಯೆ:LOK/INV (chi)B-25/CR-3/43 DVC-4 ದಿನಾಂಕ: 21.5.2005ಕ್ಕೆ 8 ವಾರಗಳವರೆಗೆ ತಡೆಯಾಜ್ಞೆ ನೀಡಿದ್ದು ಕಾಲಕಾಲಕ್ಕೆ ಸದರಿ ತಡೆಯಾಜ್ಞೆಯನ್ನು ವಿಸ್ತರಿಸುತ್ತಾ ಬಂದಿದ್ದು, ಅಂತಿಮವಾಗಿ ದಿನಾಂಕ:29.6.2006ರನ್ನು ತೀರ್ಪಿನಲ್ಲಿ ಕೆಳಕಂಡಂತೆ ಆದೇಶಿಸಿದೆ.

**ORDER**

"No representation.

Accordingly, applications are dismissed for non-prosecution".

ಶ್ರೀ ಎಂ.ಆರ್. ಭೀಮಪ್ಪ, ಆಹಾರ ನಿರೀಕ್ಷಕರವರ ಬಗ್ಗೆ ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಯು ಪ್ರತ್ಯೇಕವಾಗಿ ಕ್ರಮ ಕೈಗೊಂಡಿರುತ್ತದೆ.

**ಸರ್ಕಾರವು ಈ ವಿಷಯವನ್ನು ಕೂಲಂಕುಷವಾಗಿ ಪರಿಶೀಲಿಸಿ ಶ್ರೀ ಜೆ. ನಂಜುಂಡೇಶ್ವರ್, ಹಿಂದಿನ ಆಹಾರ ಶಿರಸ್ತೇದಾರ್ ಹಾಲಿ ತಹಶೀಲ್ದಾರ್, ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆ ಇವರನ್ನು ಸೇವೆಯಿಂದ ವಜಾಗೊಳಿಸುವ ದಂಡನೆಯನ್ನು ವಿಧಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.**

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 20 ಎಡಿಇ 2005, ಬೆಂಗಳೂರು, ದಿನಾಂಕ: 22ನೇ ಸೆಪ್ಟೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ ನಿಯಮಾವಳಿಗಳ ನಿಯಮ 14(1)ರ ಅನುಸಾರ ನಿಯಮ 8(viii)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಜೆ. ನಂಜುಂಡೇಶ್ವರ್, ಅಂದಿನ ಆಹಾರ ಶಿರಸ್ತೇದಾರ್ ಚನ್ನಗಿರಿ ತಾಲ್ಲೂಕು, ಹಾಲಿ ತಹಶೀಲ್ದಾರ್, ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶ್ರೀಮತಿ ಚಂದ್ರಶೇಖರ್**

ಪಿ.ಆರ್. 1429 ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ, (ಸೇ-3)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ಸೇರ್ಪಡೆ ಸಂಖ್ಯೆ: ಸಿಆಸುಇ 453 ಸಆಸೇ 2006, ಬೆಂಗಳೂರು, ದಿನಾಂಕ: 16ನೇ ಅಕ್ಟೋಬರ್ 2006**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜಾನ ಮತ್ತು ತಂತ್ರಜ್ಞಾನ ಇಲಾಖೆಯಲ್ಲಿ ನಿರ್ದೇಶಕರು (ಬರನಿಯಂತ್ರಣ ಕೋಶ) ಹುದ್ದೆಯನ್ನು ಸೃಜಿಸುವ ಸಂಬಂಧದಲ್ಲಿ ಹೊರಡಿಸಲಾಗಿರುವ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 352 ಸಆಸೇ 2004, ದಿನಾಂಕ: 8.6.2005ರಲ್ಲಿನ ಆದೇಶ ಭಾಗದ ಮೊದಲನೆ ಸಾಲಿನಲ್ಲಿ ಬರುವ ಇಲಾಖೆಯ ಹೆಸರಿನೊಂದಿಗೆ 'ವಿಜ್ಞಾನ ಮತ್ತು ತಂತ್ರಜ್ಞಾನ' ಎಂಬ ಪದಗಳನ್ನು ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 1569 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ವಿಷಯ:** ಕ.ಸ.ಸ.ದ ಆರ್ಥಿಕ ಇಲಾಖೆಯಲ್ಲಿ ಕಾರ್ಯದರ್ಶಿ (Reforms and PMU) ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1. ಆದೇಶ ಸಂಖ್ಯೆ: ಸಿಆಸುಇ 55 ಸಸಿವಿ 2005, ದಿನಾಂಕ: 14.9.2005 ಹಾಗೂ ದಿನಾಂಕ: 30.9.2005.

2. ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 214 ಸಮಯ 2006, ದಿನಾಂಕ: 7.10.2006.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ದಿನಾಂಕ: 14.9.2005ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯಲ್ಲಿ ಸುಧಾರಣೆಗಳನ್ನು ಮುಂದುವರೆಸಲು ಹಾಗೂ Mid Term Appraised Report ಅನ್ನು ಕಟ್ಟುನಿಟ್ಟಾಗಿ ಜಾರಿಗೆ ತರುವ ಸಲುವಾಗಿ ಒಂದು ಕಾರ್ಯದರ್ಶಿ ಹುದ್ದೆಯನ್ನು ಮತ್ತು ಪೂರಕ ಸಿಬ್ಬಂದಿ ಹುದ್ದೆಗಳನ್ನು ಸೃಜಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾಗಿರುವ ಅನಧಿಕೃತ ಟಿಪ್ಪಣಿಯಲ್ಲಿ ಕಾರ್ಯದರ್ಶಿ ಹುದ್ದೆ ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ: 14.9.2007ರವರೆಗೆ ಮುಂದುವರೆಸಲು ಪ್ರಸ್ತಾಪಿಸಿರುತ್ತಾರೆ. ಆದುದರಿಂದ ಪ್ರಸ್ತುತ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 67 ಸಸಿವಿ 2006, ಬೆಂಗಳೂರು, ದಿನಾಂಕ: 3ನೇ ನವೆಂಬರ್ 2006**

ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯಲ್ಲಿನ ಕಾರ್ಯದರ್ಶಿ (Reforms and PMU) ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ: 14.9.2007ರವರೆಗೆ ಮುಂದುವರೆಸಲಾಗಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1 ಟಿಎಫ್‌ಪಿ 96, ದಿನಾಂಕ:10.7.96ರಲ್ಲಿ ಸಹಮತಿ ನೀಡಿರುವುದೆಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 1570 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

## ವಸತಿ ಸಚಿವಾಲಯ

**ವಿಷಯ:** ದಕ್ಷಿಣ ಕನ್ನಡ ಜಿಲ್ಲೆ, ಬಂಟ್ವಾಳ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂ.ವಇ/42/ಹೆಚ್‌ಎಎಂ/1998, ದಿನಾಂಕ:10.4.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ದಕ್ಷಿಣ ಕನ್ನಡ ಜಿಲ್ಲೆ, ಬಂಟ್ವಾಳ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ.ವಇ/101/ಹೆಚ್‌ಎಎಸ್/2006, ಬೆಂಗಳೂರು, ದಿನಾಂಕ: 27ನೇ ಅಕ್ಟೋಬರ್ 2006**

ಮೇಲ್ಕಂಡ ಸಂದರ್ಭದಲ್ಲಿ ದಕ್ಷಿಣ ಕನ್ನಡ ಜಿಲ್ಲೆ, ಬಂಟ್ವಾಳ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

1. **ಶ್ರೀ ರಾಮುದಾಸ್, ಬಿನ್ ಶ್ರೀ ಅಮ್ಮುದೇವಾಡಿಗ ಹೊಸ್ಮಾರುಮನೆ, ಬೈಪಾಸ್ ರೋಡ್, ಬಂಟ್ವಾಳ, ದಕ್ಷಿಣ ಕನ್ನಡ ಜಿಲ್ಲೆ.** ಸದಸ್ಯರು
2. **ಶ್ರೀಮತಿ ಅಮೀನ ಕೋಂ. ಎ.ಆರ್. ಅಬ್ದುಲ್ ರಹಿಮನ್, ಜಕ್ರಿಬೆಟ್ಟು ಮನೆ, ಬಂಟ್ವಾಳ, ದಕ್ಷಿಣ ಕನ್ನಡ ಜಿಲ್ಲೆ.** ಸದಸ್ಯರು

3. ಶ್ರೀ ಗೋಪಾಲ ಸುವರ್ಣ ಬಿನ್ ಶಾಂತಪ್ಪ ಪೂಜಾರಿ ಬಿ. ಮೂಡ ಗ್ರಾಮ, ಬಿ.ಸಿ. ರಸ್ತೆ ಮನೆ, ಅಂಚೆ: ಜೋಡುಮಾರ್ಗ. ಸದಸ್ಯರು
4. ಶ್ರೀ ರವಿಚಂದ್ರ ನಾಯ್ಕ ಬಿನ್ ಕುಂಞ ನಾಯ್ಕ, ಗುಂಡೂರು ಮನೆ, ಪಾಣೆ ಮಂಗಳೂರು ಗ್ರಾಮ. ಸದಸ್ಯರು

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1574

**ಎಸ್. ಇಂದುಮತಿ**

ಪೀಠಾಧಿಕಾರಿ-2, ವಸತಿ ಇಲಾಖೆ.

**ವಿಷಯ:** ಹಾಸನ ಜಿಲ್ಲೆ, ಅರಕಲಗೂಡು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂ.ವಇ/42/ಹೆಚ್ಎಎಂ/1998, ದಿನಾಂಕ:10.4.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಹಾಸನ ಜಿಲ್ಲೆ, ಅರಕಲಗೂಡು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ.ವಇ/115/ಹೆಚ್ಎಎಸ್/2006, ಬೆಂಗಳೂರು, ದಿನಾಂಕ: 27ನೇ ಅಕ್ಟೋಬರ್ 2006**

ಮೇಲ್ಕಂಡ ಸಂದರ್ಭದಲ್ಲಿ ಹಾಸನ ಜಿಲ್ಲೆ, ಅರಕಲಗೂಡು ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

1. ಶ್ರೀ ಸುರೇಶ್ ಬಿನ್ ಅಣ್ಣೇಗೌಡ ಎಮಿನೆಂಟ್ ಮಲ್ಟಿಜಿಮ್, ಕೋಟೆ, ಅರಕಲಗೂಡು ಹಾಸನ ಜಿಲ್ಲೆ. ಸದಸ್ಯರು
2. ಶ್ರೀ ಸೈಯದ್ ಅಯೂಬ್ ಬಿನ್ ಸೈಯದ್ ಜಲಾಲ್ ಅಹಮ್ಮದ್, ವಕೀಲರು, ಕೋಟೆ, ಅರಕಲಗೂಡು, ಹಾಸನ ಜಿಲ್ಲೆ. ಸದಸ್ಯರು
3. ಶ್ರೀ ರಾಮು, ಬಿನ್ ಗೋಪಾಲ ಕೆಲ್ಲೂರು, ಪೇಟೆ, ಅರಕಲಗೂಡು, ಹಾಸನ ಜಿಲ್ಲೆ. ಸದಸ್ಯರು
4. ಶ್ರೀಮತಿ ಪದ್ಮ ಕೋಂ. ರಾಜೇಗೌಡ ಅರವಟ್ಟಿಗೆ ತಿಟ್ಟ, ಅರಕಲಗೂಡು, ಹಾಸನ ಜಿಲ್ಲೆ. ಸದಸ್ಯರು

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1575

**ಎಸ್. ಇಂದುಮತಿ**

ಪೀಠಾಧಿಕಾರಿ-2, ವಸತಿ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** ಅ.ಟಿ. ಸಂಖ್ಯೆ: ಮುಅಇ 78 ಮುಇವಿ 2006, ದಿನಾಂಕ: 26.9.2006.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ದಿನಾಂಕ: 26.9.206ರ ಅನಧಿಕೃತ ಟಿಪ್ಪಣಿಯಲ್ಲಿ ಮೂಲ ಸೌಲಭ್ಯ ಅಭಿವೃದ್ಧಿ ಇಲಾಖೆಗೆ ಮಂಜೂರು ಮಾಡಿರುವ ಒಟ್ಟು 37 ಅಧಿಕಾರಿ ಮತ್ತು ಸಿಬ್ಬಂದಿ ವರ್ಗದ ಹುದ್ದೆಗಳನ್ನು ದಿನಾಂಕ: 20.9.2006 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲು ಪ್ರಸ್ತಾಪಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 68 ಸಸಿವಿ 2006, ಬೆಂಗಳೂರು, ದಿನಾಂಕ: 3ನೇ ನವೆಂಬರ್ 2006**

ಕರ್ನಾಟಕ ಸರ್ಕಾರ ಸಚಿವಾಲಯದ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಗೆ ಮಂಜೂರಾಗಿರುವ ಒಟ್ಟು ತಾತ್ಕಾಲಿಕ 37 ಹುದ್ದೆಗಳ ಅವಧಿಯನ್ನು ದಿನಾಂಕ: 20.9.2007 ರವರೆಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1 ಟಿಎಫ್‌ಪಿ 96, ದಿನಾಂಕ: 10.7.96 ರಲ್ಲಿ ಸಹಮತಿ ನೀಡಿರುವುದೆಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 1571

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

## INFRASTRUCTURE DEVELOPMENT SECRETARIAT

**Sub:** Release of Government of Karnataka's 50% share of the cost escalation towards Sholapur-Gadag Railway guage conversion project-reg.

**Read:**
1. GO. No: IDD 1 NSW 03, dt: 03/03/2003.
2. GO. No: IDD 1 NSW 03, dt: 29/03/2003.
3. GO. No: IDD 40 NSW 03, dt: 16/09/2003.
4. GO. No: IDD 95 NSW 03, dt: 22/01/2004.
5. GO. No: IDD 42 NSW 2004, dt: 16/09/2004.
6. GO. No: IDD 21 NSW 05, dt: 22/02/2005.
7. GO. No: IDD 21 NSW 05, dt: 29/03/2005.
8. GO. No: IDD 420 NSW 04(p), dt: 22/07/2005.

9. Proceedings of a meeting held under the chairmanship of Chief Secretary to Government of Karnataka on 18/08/2005.
10. GO. No: IDD 42 NSW 04(P), dt: 15/10/2005.
11. GO. No: FD 205 BRS 2006, dt: 27/03/2006.
12. GO. No: FD 206 BRS 2006, dt: 27/03/2006.
13. GO. No: IDD 63 IDM 2005, dt: 28/03/2006.
14. The letter No.W.148/RUB/RMGM dt:5.10.2006 of Chief Administrative Officer, South Western Railway, Bangalore.
15. GO. No: FD 304 BRS 2006, dt: 19/10/2006.
16. The letter No.W.352CN/BNC dt:6.9.2006 of CAO, SWR, Bangalore.

**Preamble:-**

1. In the Government orders read at S.No.(1) to (8) & (10) to (13) above, Government of Karnataka have released their agreed 50% share of balance cost towards Sholapur-Gadag railway gauge conversion project amounting to Rs.89,36,00,000-00.

2. The Chief Administrative Officer, South Western Railway, Bangalore in his letter dated 5.10.2006 read at Sl.No.(14) above, has requested Government of Karnataka to release Rs.28,678 crores being the 50% share of Government of Karnataka towards the cost escalation of Sholapur-Gadag railway gauge conversion project in order to speed up the project.

3. As no provision has been made by GoK in the budget for 2006-07 towards Sholapur-Gadag gauge conversion project, it was not possible to release the amount under the said head, as it would attract new service. Hence, FD was requested for re-appropriation of Rs.20.00 crores from the following Heads of Account to the Head of Account 5465-01-190-3-05-Cost sharing for new projects-211-Investments (Plan) and it was decided to release the amount from this head:

| | | | |
|---|---|---|---|
| a) | 5465-01-190-3-02 (P)<br>Hassan-Mangalore gauge conversion project-211- Investments | - | Rs.500-00 Lakhs |
| b) | 5465-01-190-3-07 (P)<br>Commuter Rail Services for Bangalore-21-Ivestments | - | Rs.1000-00 Lakhs |
| c) | 5465-01-190-3-10 (P)<br>Cost Sharing Bidar-Gulbarga New Raiway line 059- Other Expenditure | - | 500-00 Lakhs |
| | **Total** | **-** | **2000-00 Lakhs** |

4. In the Government Order dated 19.6.2006 read at Sl.No. (15) above, the Fnance Department has accorded sanction for the re-appropriation of a sum of Rs.2000-00 lakhs under the major head of account "5465 capital outlay on General Financial Trading Institution during 2006-07 as per the details mentioned in para (3) above. Hence this order.

**Government Order No: IDD 42 NSW 2004, Bangalore, Dated 21st/25th October 2006**

After careful examination of the above, Government is pleased to accord sanction for release of Rs.20,00,00,000-00 crores (Rupees Twenty crores) only being the 50% share of Government of Karnataka towards the cost of escalation of Sholapur-Gadag gauge conversion project by re-appropriation from the following heads to the Head of Account 5465-01-190-3-05-Cost sharing for New projects-211 Investments (Plan) subject to the condition that the railways shall complete the balance of works as agreed to in their letter dated 6.9.006 read at Sl.No. (16) above, between i) Bijapur - Holialur section by November 2007 and ii) Holialur - Gadag section by March 2008 (Bijapur Gadag rail line)

I. Release of Rs.5,00,00,000-00 crores (Rupees Five crores) only from the Head of Account "5465-01-190-3-02-(P) Hassan Mangalore Gauge Conversion Project 211-Investments"
II. Release of Rs.10,00,00,000-00 crres (Rupees Ten Crores) only from the head of account "5465-01-190-3-07 (I') Commuter Rail Services for Bangalore 211 nvestments"
III. Release of Rs.5,00,00,000-00 crores (Rupees Five crores) only from the head of account "5465-01-190-3-10(P) Cost sharing Bidar Gulbarga new railway line 059 Other expenditure" thereby totalling to Rs.20,00,000-00 crores.

2. The Chief Finance Officer of iDeCK is authorized to draw the amount through a payee's receipt duly countersigned by the Under Secretary to Government, Infrastructure Development Department and iDeCK shall in turn deposit the same with the Financial Adviser and Chief Accounts Officer (Construction), South Western Railway, Bangalore.

3. The Chief Engineer (Construction, South Western Railway shall arrange to furnish monthly expenditure statement to the Infrastructure Development Department by 5th of the succeeding month.

4. This order issues with the concurrence of Finance Dpartment vide its U.O.Note No: FD 1835 Exp-I/06 dated 19.10.2006 and G.O. No. FD 304 BRS 2006, dated 19.10.2006.

By Order and in the name of the Governor of Karnataka,

**N. MANJULA GEETHA**

Under Secretary to Government,

Infrastructure Development Department

P.R. 1577

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಡಾ:ಯು.ಪಿ. ಚಂದ್ರಶೇಖರ, ಕಾರ್ಯದರ್ಶಿಗಳು ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗ ಕಡ್ಡಾಯ ನಿರೀಕ್ಷಣಾ ಅವಧಿ ಘೋಷಣೆ ಕುರಿತು.

**ಓದಲಾಗಿದೆ:**

1. ಸಂ: ಕರಾಹಿಂವಾ:ಸಿಬ್ಬಂದಿ/ಸಿಆರ್-14/2006-07 ದಿನಾಂಕ:24.7.2006.
2. ಸರ್ಕಾರಿ ಅಧಿಸೂಚನೆ ಸಂ:ಸಕಇ 131 ಪಕಸೇ: 2005 ದಿನಾಂಕ: 7.4.2006.
3. ಡಾ:ಯು.ಪಿ. ಚಂದ್ರಶೇಖರ, ಜಂಟಿ ನಿರ್ದೇಶಕರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ಇವರು ಸರ್ಕಾರದಲ್ಲಿ ಸ್ಥಳ ನಿಯುಕ್ತಿ ಕೋರಿ ವರದಿ ಮಾಡಿಕೊಂಡ ಮನವಿ ದಿನಾಂಕ:12.4.2006.
4. ಸರ್ಕಾರಿ ಅಧಿಸೂಚನೆ:ಸಂ:ಸಕಇ 103 ಬಿಇಟಿ 2006 ದಿನಾಂಕ:4.7.2006.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ:1ರಲ್ಲಿ ಡಾ:ಯು.ಪಿ. ಚಂದ್ರಶೇಖರ್, ಜಂಟಿ ನಿರ್ದೇಶಕರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಹಾಲಿ, ಕಾಯದರ್ಶಿಗಳು, ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗ, ಬೆಂಗಳೂರು ಇವರ ನಿಯುಕ್ತಿ ನಿರೀಕ್ಷಣಾ ಅವಧಿ ದಿನಾಂಕ:12.4.2006 ರಿಂದ 4.7.2006 ರವರೆಗಿನ ಅವಧಿಯನ್ನು ಕಡ್ಡಾಯ ನಿರೀಕ್ಷಣಾ ಅವಧಿಯೆಂದು ಪರಿಗಣಿಸಿ ಆದೇಶ ಹೊರಡಿಸುವಂತೆ ಕೋರಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: 2 ಮತ್ತು 3ರಲ್ಲಿ ಡಾ:ಯು.ಪಿ. ಚಂದ್ರಶೇಖರ್, ಜಂಟಿ ನಿರ್ದೇಶಕರು, ಮೂಲತಹ: ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯವರಾಗಿದ್ದು, ಸರ್ಕಾರಿ ಆದೇಶ ಸಂಖ್ಯೆ: ಸಕಇ 131 ಪಕಸೇ 2005 ದಿನಾಂಕ:7.4.2006 ರನ್ವಯ ಕರ್ನಾಟಕ ರಾಜ್ಯ ಅನುಸೂಚಿತ ಜಾತಿ, ಅನುಸೂಚಿತ ಬುಡಕಟ್ಟುಗಳ ಆಯೋಗದ ಕಾರ್ಯರ್ಶಿಯವರ ಹುದ್ದೆಯ ಪ್ರಭಾರದಿಂದ ದಿನಾಂಕ:12.4.2006 ರಂದು ಕಾರ್ಯನಿಯುಕ್ತಿ ಹೊಂದಿದ್ದು ಸದರಿ ಆದೇಶದಲ್ಲಿ ಸ್ಥಳ ಯೋಜನೆ ಮಾಡಿಲ್ಲದ ಕಾರಣ ಸದರಿ ಅಧಿಕಾರಿಯವರು ದಿನಾಂಕ:12.4.2006 ರಂದು ಸ್ಥಳ ನಿಯುಕ್ತಿ ಕೋರಿ ಸರ್ಕಾರಕ್ಕೆ ಮನವಿ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ: 4ರಲ್ಲಿ ಸರ್ಕಾರಿ ಆದೇಶ ಸಂಖ್ಯೆ:ಸಕಇ 103 ಬಿಇಟಿ 2006 ದಿನಾಂಕ:4.7.2006 ರಲ್ಲಿ ಶ್ರೀಯುತರನ್ನು ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗದ ಕಾರ್ಯದರ್ಶಿಯವರನ್ನಾಗಿ ನೇಮಿಸಲಾಗಿದ್ದು, ದಿನಾಂಕ:5.7.2006ರ ಪೂರ್ವಾಹ್ನ ಸದರಿ ಹುದ್ದೆಯ ಕಾರ್ಯಭಾರ ವಹಿಸಿಕೊಂಡಿರುತ್ತಾರೆ. ಈ ಹಿನ್ನೆಲೆಯಲ್ಲಿ ಸದರಿ ಅಧಿಕಾರಿಯವರ ದಿನಾಂಕ:12.4.2006 ರಿಂದ 4.7.2006ರ ಸ್ಥಳ ನಿಯುಕ್ತಿಯ ನಿರೀಕ್ಷೆಯ ಅವಧಿಯನ್ನು ಕಡ್ಡಾಯ ನಿರೀಕ್ಷಣಾ ಅವಧಿ ಎಂದು ಘೋಷಿಸಬೇಕಿದೆ. ಕಾರಣ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಕಇ 170 ಬಿಸಿಎ 2006, ಬೆಂಗಳೂರು, ದಿನಾಂಕ: 28ನೇ ಅಕ್ಟೋಬರ್ 2006**

ಡಾ:ಯು.ಪಿ. ಚಂದ್ರಶೇಖರ್, ಜಂಟಿ ನಿರ್ದೇಶಕರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಬೆಂಗಳೂರು ಹಾಲಿ ಕಾರ್ಯದರ್ಶಿಗಳು, ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗ, ಬೆಂಗಳೂರು ಇವರ, ದಿನಾಂಕ:12.4.2006 ರಿಂದ 4.7.2006 ರವರೆಗಿನ (ಎರಡು ದಿನಗಳು ಸೇರಿ) ಅವಧಿಯನ್ನು ಕರ್ನಾಟಕ ನಾಗರೀಕ ಸೇವೆ ನಿಯಮಾವಳಿ ನಿಯಮ-8(15ಎಫ್) ಅನ್ವಯ ಕಡ್ಡಾಯ ನಿರೀಕ್ಷಣಾ ಅವಧಿ ಎಂದು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಂ. ಚಿದಾನಂದಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಮಾಜ ಕಲ್ಯಾಣ ಇಲಾಖೆ

ಪಿ.ಆರ್. 1579

**ವಿಷಯ:** ಶ್ರಮಶಕ್ತಿ ಯೋಜನೆಯಲ್ಲಿ ವೃತ್ತಿ ಕುಲಕಸುಬುಗಳನ್ನು/ಕುಶಲಕರ್ಮಿಗಳನ್ನು ಸೇರಿಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ:ಸಕಇ 245 ಬಿಎಂಎಸ್ 2004, ದಿನಾಂಕ:9.3.2005.
2. ವ್ಯವಸ್ಥಾಪಕ ನಿರ್ದೇಶಕರು ಡಿ. ದೇವರಾಜ ಅರಸು ವರ್ಗಗಳ ಅಭಿವೃದ್ಧಿ ನಿಗಮ ನಿಯಮಿತ ಬೆಂಗಳೂರು ಇವರ ಪತ್ರ ಸಂ:ದೇಹಿನಿ/ವ್ಯವ/122/2/2005-06, ದಿ:9.3.2006.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ:9.3.2005ರ ಸರ್ಕಾರಿ ಆದೇಶದಲ್ಲಿ ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ನಿಯಮಿತದಲ್ಲಿ ಶ್ರಮಶಕ್ತಿ ಯೋಜನೆ ಕುರಿತಂತೆ 34 ಕುಲಕಸುಬುಗಳನ್ನು ಯೋಜನೆಗಳಿಗೆ ಒಳಪಡಿಸಿ, ಆದೇಶ ಹೊರಡಿಸಲಾಗಿದೆ. **ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ನಿಯಮಿತ ಇವರು ಪ್ರಸ್ತಾವನೆ ಸಲ್ಲಿಸಿ, ದಿನಾಂಕ:19.1.2006 ರಂದು ಜರುಗಿದ ನಿಗಮದ 119ನೇ ನಿರ್ದೇಶಕರ ಮಂಡಳಿಯ ಸಭೆಯು ಈ ಕೆಳಕಂಡ ವೃತ್ತಿ ಕುಲಕಸುಬುಗಳನ್ನು ಶ್ರಮಶಕ್ತಿ ಯೋಜನೆಗೆ ಸೇರ್ಪಡೆ ಮಾಡಿಕೊಳ್ಳಲು ತೀರ್ಮಾನಿಸಿದೆ. ಆದರಂತೆ ಈ ಕೆಳಗಿನಂತೆ ಆದೇಶಿಸಿದೆ.**

**ಸರ್ಕಾರದ ಆದೇಶ ಸಂಖ್ಯೆ: ಸಕಇ 245 ಬಿಎಂಎಸ್ 2004, ಬೆಂಗಳೂರು, ದಿನಾಂಕ: 12ನೇ ಅಕ್ಟೋಬರ್ 2006**

ಸರ್ಕಾರವು ಪ್ರಸ್ತಾವನೆಯಲ್ಲಿರುವ ಅಂಶಗಳನ್ನು ಪರಿಶೀಲಿಸಿ, ಶ್ರಮಶಕ್ತಿ ಯೋಜನೆಯಲ್ಲಿ 34 ವೃತ್ತಿ ಕುಲಕಸುಬುಗಳ ಜೊತೆಗೆ ಈ ಕೆಳಗೆ ತಿಳಿಸಿರುವ ಶ್ರಮಶಕ್ತಿ ಯೋಜನೆಯ ವೃತ್ತಿ ಕುಲಕಸುಬುಗಳನ್ನು ಸೇರ್ಪಡೆ ಮಾಡಿ ಶ್ರಮಶಕ್ತಿ ಯೋಜನೆ ಸೌಲಭ್ಯವನ್ನು ಈ ವೃತ್ತಿಗಳನ್ನು ಮಾಡುವ ಹಿಂದುಳಿದ ವರ್ಗಗಳ ವೃತ್ತಿಪರ ಜನರಿಗೆ ವಿಸ್ತರಿಸಲು ಅನುಮೋದನೆ ನೀಡಿದೆ.

1. ಮೀನುಗಾರಿಕೆ
2. ಪಾತ್ರೆಗಳಿಗೆ ಕಲಾಯಿ
3. ವಾಲಗ ಊದುವುದು
4. ಸೇಂದಿ ತೆಗೆಯುದು (ಮೂರ್ತೆಗಾರಿಕೆ)
5. ನಾಟಿ ಔಷಧ
6. ವಾದ್ಯ ವೃಂದ ವೃತ್ತಿ
7. ದನಗಾಹಿ ವೃತ್ತಿ
8. ಹೂ ಕಟ್ಟು ವೃತ್ತಿ
9. ಬಣ್ಣ/ಶೃಂಗಾರ ಮಾಡುವ ವೃತ್ತಿ
10. ಹೈನುಗಾರಿಕೆ (ಗೌಳಿ ವೃತ್ತಿ)
11. ಅಡಿಕೆ ಹಾಳೆಯಿಂದ ಊಟದ ತಟ್ಟೆ, ಬಟ್ಟಲು ತಯಾರಿಸುವ ವೃತ್ತಿ

ಈ ವೃತ್ತಿ ಕುಲಕಸುಬುಗಳನ್ನು ಶ್ರಮಶಕ್ತಿ ಯೋಜನೆಯನ್ನು 2006-07ನೇ ಸಾಲಿಗೆ ಒದಗಿಸಿರುವ ಅನುದಾನದಿಂದಲೇ ಈ ಕಾರ್ಯಕ್ರಮದ ವೆಚ್ಚವನ್ನು ಅನುದಾನದಿಂದಲೇ ಭರಿಸತಕ್ಕದ್ದು.

ಈ ಆದೇಶವನ್ನು ಟಿಪ್ಪಣಿ ಸಂಖ್ಯೆ: ಸಕಕಾ 238 ಅಂಆಸ 2006, ದಿನಾಂಕ: 23.5.2006 ರಲ್ಲಿ ಆಂತರಿಕ ಆರ್ಥಿಕ ಸಲಹೆಗಾರರು ನೀಡಲಾಗಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಲ್. ಸುಶೀಲಮ್ಮ**

ಪಿ.ಆರ್. 1580

ಸರ್ಕಾರದ ಅಧೀನ ಕಾರ್ಯದರ್ಶಿ,

ಸಮಾಜ ಕಲ್ಯಾಣ ಇಲಾಖೆ

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ:** ಶ್ರೀ ಖಲೀಂ ಅಹ್ಮದ್, ಕಾರ್ಯಪಾಲಕ ಇಂಜಿನಿಯರ್ (ನಿವೃತ್ತ) ಶ್ರೀ ಪಿ.ಹೆಚ್. ಫಜಲುಲ್ಲಾ, ಸಹಾಯಕ ಇಂಜಿನಿಯರ್ ಮತ್ತು ಶ್ರೀ ಗೋಪಾಲ್, ಲೆಕ್ಕಾಧೀಕ್ಷಕರು ಸಣ್ಣ ನೀರಾವರಿ ವಿಭಾಗ, ಬಳ್ಳಾರಿ, ಇವರ ವಿರುದ್ಧದ ಶಿಸ್ತು ಕ್ರಮದ ಬಗ್ಗೆ.

**ಓದಲಾಗಿದೆ:**
1. ಮುಖ್ಯ ಅಭಿಯಂತರರು, ಸಣ್ಣ ನೀರಾವರಿ(ಉ)ಬಿಜಾಪುರ/ತನಿಖಾವರದಿ/ಎ.ಇ-12/05-06/ 1841/ದಿನಾಂಕ: 22.4.2006.
2. ಮುಖ್ಯ ಅಭಿಯಂತರರು, ಸಣ್ಣ ನೀರಾವರಿ(ಉ)ಬಿಜಾಪುರ ಪತ್ರ ಸಂಖ್ಯೆ:ಮುಇಂ/ಸನೀ(ಉ)ಸಿ-1/06-07/2823/ದಿನಾಂಕ: 21.6.2006.
3. ಸರ್ಕಾರದ ಕಾರಣ ಕೇಳುವ ಸೂಚನಾ ಪತ್ರ ಸಂಖ್ಯೆ: ಸನೀವಿ 23 ಸೇಇವಿ 06 ದಿನಾಂಕ:14.7.06.
4. ಶ್ರೀ ಪಿ.ಹೆಚ್. ಫಜಲುಲ್ಲಾ, ಸಹಾಯಕ ಇಂಜಿನಿಯರ್, ಇವರ ಲಿಖಿತ ಹೇಳಿಕೆ ದಿನಾಂಕ:5.8.06.
5. ಶ್ರೀ ಕೆ. ಕಲೀಂ ಅಹ್ಮದ್, ಕಾರ್ಯಪಾಲಕ ಇಂಜಿನಿಯರ್, (ನಿವೃತ್ತ) ಇವರ ಲಿಖಿತ ಹೇಳಿಕೆ ದಿನಾಂಕ:7.8.06.
6. ಶ್ರೀ ಜಿ. ಗೋಪಾಲ್, ಲೆಕ್ಕಾಧೀಕ್ಷಕರು, ಇವರ ಲಿಖಿತ ಹೇಳಿಕೆ ದಿನಾಂಕ:23.8.06.

**ಪ್ರಸ್ತಾವನೆ:**

ಮೇಲೆ ಓದಲಾದ (1) ರಲ್ಲಿ ದಿನಾಂಕ:22.4.2006ರ ಮುಖ್ಯ ಅಭಿಯಂತರರು, ಸಣ್ಣ ನೀರಾವರಿ (ಉ) ಬಿಜಾಪುರ ಇವರ ತನಿಖಾ ವರದಿಯಲ್ಲಿ ಈ ಕೆಳಕಂಡ ಅಧಿಕಾರಿ/ನೌಕರರುಗಳು ಸಣ್ಣ ನೀರಾವರಿ ವಿಭಾಗ, ಬಳ್ಳಾರಿ ಇಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ 05-06ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ 2702 ರಡಿ ಒಟ್ಟು 103.00 ಲಕ್ಷ ಅನುದಾನವನ್ನು ಅಂದಾಜುಪಟ್ಟಿಯಿಲ್ಲದೆ ಪಾವತಿಸಿರುವುದಾಗಿಯು 1999-2004ರ ಅವಧಿಯಲ್ಲಿ ವಿವಿದ ಕಾಮಗಾರಿಗಳಿಗಾಗಿ ಒಟ್ಟು 36.46 ಲಕ್ಷಗಳ ಕೊಟೇಷನ್‌ಗಳಿಗೆ ಅಧಿಕಾರ ವ್ಯಾಪ್ತಿ ಮೀರಿ ಮಂಜೂರಾತಿ ನೀಡಿರುವುದಾಗಿಯು, ಇದೇ ಅವಧಿಯಲ್ಲಿ ಉಗ್ರಾಣ ಸಾಮಗ್ರಿಗಳ ಖರೀದಿ ಮಂಜೂರಾತಿಗಾಗಿ ರೂ.15,000/-ಕ್ಕೂ ಮೀರಿದ 5 ಕೊಟೇಷನ್‌ಗಳಿಗೆ ಸಂಬಂಧಿಸಿದಂತೆ ಪ್ರತಿ ಒಂದು ಕೊಟೇಷನ್‌ಗೆ ರೂ.15,000/- ರಂತೆ ಒಟ್ಟು ರೂ.1.51 ಲಕ್ಷಗಳನ್ನು ಪಾವತಿಸಿದ್ದು, 04-05ರಲ್ಲಿ 10,36,507/-ಗಳನ್ನು ಸ್ಟೇಷನರಿ ವಾಹನ ಮತ್ತು ಇತರೆ ಖರ್ಚುಗಳಿಗಾಗಿ ವೋಚರ್‌ಗಳ ಮೂಲಕ ಬಿಲ್ಲುಗಳನ್ನು ಸಲ್ಲಿಸಿ ಖರ್ಚು ಮಾಡಿರುವುದಾಗಿ ಹಾಗೂ ಇದೇ ಸಾಲಿನಲ್ಲಿ ರೂ.70,790/-ಗಳಿಗೆ ಒಟ್ಟು 7 ಚೆಕ್ಕುಗಳನ್ನು ಸ್ವಂತ ಹೆಸರಿನಲ್ಲಿ ಪಾವತಿ ಮಾಡಿ ಪಿ.ಡಬ್ಲ್ಯೂ.ಡಿ. ಕೋಡ್, ಕೆ.ಎಫ್.ಸಿ. ಮತ್ತು ಕಛೇರಿ ಕಾರ್ಯವಿಧಾನಗಳನ್ನು ಉಲ್ಲಂಘಿಸಿ ಮನಸೋ ಇಚ್ಚೆ ಅಂದಾಜು ಪತ್ರಿಕೆಗಳಿಗೆ ಮೇಲಾಧಿಕಾರಿಗಳ ಮಂಜೂರಾತಿ ಇಲ್ಲದೇ ಕ್ರಮಕೈಗೊಂಡು ಹಲವಾರು ದುರ್ನಡತೆಗಳನ್ನು ಎಸಗಿರುವುದು ಮೇಲ್ನೋಟಕ್ಕೆ ಕಂಡುಬಂದಿರುವುದಾಗಿ ವರದಿ ನೀಡಿ ಈ ಬಗ್ಗೆ ತನಿಖೆ ಕೈಗೊಂಡಲ್ಲಿ ಹೆಚ್ಚಿನ ಸತ್ಯಾಂಶಗಳು ಕಂಡುಬರಬಹುದೆಂದು ಮೇಲೆ (2)ರ ಪತ್ರದಲ್ಲಿ ಅಭಿಪ್ರಾಯ ನೀಡಿರುತ್ತಾರೆ.

1. ಶ್ರೀ ಕೆ. ಕಲೀಂ ಅಹಮದ್, ಕಾರ್ಯಪಾಲಕ ಇಂಜಿನಿಯರ್ (ನಿವೃತ್ತ)
2. ಶ್ರೀ ವಿ.ಹೆಚ್. ಫಜಲುಲ್ಲಾ, ಸಹಾಯಕ ಇಂಜಿನಿಯರ್,
3. ಶ್ರೀ ಗೋಪಾಲ್, ಲೆಕ್ಕಾಧೀಕ್ಷಕರು,

ಮುಖ್ಯ ಅಭಿಯಂತರರ ವರದಿಯನ್ನು ಸರ್ಕಾರವು ಪರಿಶೀಲಿಸಿದ್ದು, ಅವರ ವರದಿಯಲ್ಲಿನ ಅಂಶಗಳು ಮೇಲ್ನೋಟಕ್ಕೆ ಕಂಡುಬಂದಿದ್ದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214ರ ಜೊತೆಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಅಪೀಲು) ನಿಯಮಾವಳಿಗಳು 1957ರ ನಿಯಮ 11 ರಡಿ ಅವರ ವಿರುದ್ಧದ ಆರೋಪಗಳಿಗೆ ಸಂಬಂಧಿಸಿದಂತೆ ಶಿಸ್ತು ಕ್ರಮ ಜರುಗಿಸಲು ಸರ್ಕಾರವು ಉದ್ದೇಶಿಸಿ, **ಮೇಲೆ ಓದಲಾದ (3)ರಲ್ಲಿ ಈ ಮೇಲ್ಕಂಡ ಅಧಿಕಾರಿಗಳಿಗೆ ಕಾರಣ ಕೇಳುವ ಸೂಚನಾ ಪತ್ರಗಳನ್ನು ದೋಷಾರೋಪಣಾ ಪಟ್ಟಿಯೊಂದಿಗೆ (ಅನುಬಂಧ-1 ರಿಂದ 4) ಜಾರಿಗೊಳಿಸಲಾಗಿತ್ತು. ಈ ಮೇಲ್ಕಂಡ ಅಧಿಕಾರಿ/ನೌಕರರು ಮೇಲೆ ಓದಲಾದ 4 ರಿಂದ 6ರಲ್ಲಿ ತಮ್ಮ ಲಿಖಿತ ಹೇಳಿಕೆಯನ್ನು ಪೂರಕ ದಾಖಲೆಗಳೊಂದಿಗೆ ಸಲ್ಲಿಸಿರುತ್ತಾರೆ.**

ಶ್ರೀ ಖಲೀಂ ಅಹ್ಮದ್, ಕಾರ್ಯಪಾಲಕ ಇಂಜಿನಿಯರ್, (ನಿವೃತ್ತ) ರವರು ಅವರು ನೀಡಿರುವ ಲಿಖಿತ ಹೇಳಿಕೆಲ್ಲಿ 05-06ನೇ ಸಾಲಿನಲ್ಲಿ ಸಣ್ಣ ನೀರಾವರಿ ವಿಭಾಗ, ಬಳ್ಳಾರಿ ಇಲ್ಲಿ ಲೆಕ್ಕಶೀರ್ಷಿಕೆ 2702ರಡಿಯಲ್ಲಿ ವಿವಿಧ ಕಾಮಗಾರಿಗಳಿಗೆ ಸರ್ಕಾರದ ಪತ್ರ ಸಂಖ್ಯೆ ಸನೀಇ 63 ಆವಿಸಂ 2005, ದಿನಾಂಕ:15.3.2006ರಲ್ಲಿ ರೂ.79.50 ಲಕ್ಷಗಳ ಅನುದಾನವನ್ನು ಮಾತ್ರ ಒದಗಿಸಿರುತ್ತದೆ. ಈ ಅನುದಾನದಲ್ಲಿ ಮೇಲ್ಮೈಬಲ ಕಾಮಗಾರಿಗೆ ರೂ.18.00 ಏತ ನೀರಾವರಿ ಕಾಮಗಾರಿಗಳಿಗೆ ರೂ.50.60 ಲಕ್ಷ ಮತ್ತು ಕಚೇರಿ ವೆಚ್ಚಕ್ಕಾಗಿ ರೂ.5.00 ಲಕ್ಷಗಳು ಹಾಗೂ ಹೊಸ ಕಾಮಗಾರಿಗಳಿಗಾಗಿ ಒಟ್ಟು, 79.50 ಲಕ್ಷಗಳ ಅನುದಾನ ಕ್ರಿಯಾ ಯೋಜನೆಗೆ ಅನುಮೋದನೆ ನೀಡಲಾಗಿದೆಯೆಂದು ಸದರಿ ಅನುದಾನದಲ್ಲಿ 26.93 ಲಕ್ಷಗಳ ಕಾಮಗಾರಿಗೆ ವಿಭಾಗ ಮಟ್ಟದಲ್ಲಿ ಮಂಜೂರಾತಿ ನೀಡಲಾಗಿರುತ್ತದೆಂದು ರೂ.25.30 ಲಕ್ಷಗಳ ಕಾಮಗಾರಿಗೆ ಅಧೀಕ್ಷಕ ಅಭಿಯಂತರರು ವೃತ್ತ ಕಚೇರಿ ಇವರಿಂದ ಮಂಜೂರಾತಿ ಪಡೆಯಲಾಗಿದ್ದು. 05-06ನೇ ಸಾಲಿನಲ್ಲಿ ಒಟ್ಟು 52.30 ಲಕ್ಷದಷ್ಟು ಹೊಸ ಕಾಮಗಾರಿಗಳಿಗೆ ವೆಚ್ಚ ಮಾಡಲಾಗಿದೆಯೆಂದು ಅನುದಾನಕ್ಕಿಂತ ಹೆಚ್ಚಿನ ಬಳಕೆಯಾಗಿರುವುದಿಲ್ಲವೆಂದೂ ಹಾಗೂ ರೂ.15,000/ಗಳ ಮೊತ್ತ ಮೀರದ ಕಾಮಗಾರಿಗಳಿಗೆ ಉಪ ಅಂದಾಜುಗಳನ್ನು ವಿಭಾಗ ಮಟ್ಟದಿಂದಲೇ ಅನುಮೋದನೆ ನೀಡಲಾಗಿದ್ದು, ಅದಕ್ಕಿಂತ ಹೆಚ್ಚಿನ ಮೊತ್ತದ ಕಾಮಗಾರಿಗಳ ಅಂದಾಜಿಗೆ ವೃತ್ತ ಕಚೇರಿಯಿಂದ ಅನುಮೋದನೆ ಪಡೆಯಲಾಗಿದೆಯೆಂದು, ಯಾವುದೇ ನಿಯಮಗಳ ಉಲ್ಲಂಘನೆಯಾಗಿರುವುದಿಲ್ಲವೆಂದು ತಿಳಿಸುತ್ತಾ, ಆರೋಪಗಳಿಂದ ಮುಕ್ತಗೊಳಿಸುವಂತೆ ಮನವಿ ಮಾಡಿರುತ್ತಾರೆ.

ಶ್ರೀ ಪಿ.ಹೆಚ್. ಫಜಲುಲ್ಲಾ, ಸ.ಇಂ. ಮತ್ತು ಶ್ರೀ ಗೋಪಾಲ್, ಲೆಕ್ಕಾಧೀಕ್ಷಕರು, ಇವರುಗಳು ಅವರ ಮನವಿಯಲ್ಲಿ ಅವರ ವಿರುದ್ಧದ ಆರೋಪಗಳು ಸಮಂಜಸಲ್ಲವೆಂದು ವಿಭಾಗದಲ್ಲಿ ಇಡಿ ಸಾಲಿನಲ್ಲಿ ಖರ್ಚಾದ ಒಟ್ಟು ಮೊತ್ತವನ್ನು ದುರುಪಯೋಗವೆಂದು ತಿಳಿಸಿರುವುದು ಸರಿಯಲ್ಲವೆಂದು ವಾಹನಗಳ ದುರಸ್ತಿ ಅನುದಾನ ವೆಚ್ಚ, ಇತ್ಯಾದಿ ಖರ್ಚುಗಳಿಗೆ ಆಗಿಂದಾಗ್ಗೆ ಮಾಡಿದ ಖರ್ಚುಗಳಿಗೆ ವೋಚರ್‌ಗಳಿಗೆ ತಯಾರಿಸಿ ಬಿಲ್ಲುಗಳನ್ನು ಪಾಸು ಮಾಡಲಾಗಿದೆ ಎಂದು ಕಾರ್ಯಪಾಲಕ ಅಭಿಯಂತರರ ಅನುಮೋದನೆ ಪಡೆದ ನಂತರವೇ ವಿದ್ಯುಚ್ಛಕ್ತಿ, ಬಿಲ್ಲುಗಳು ಟೆಲಿಫೋನ್ ಬಿಲ್ಲುಗಳು ಮತ್ತು ಕಂಪ್ಯೂಟರ್ ಆಪರೇಟರ್ ಮತ್ತು ವಾಹನ ಚಾಲಕರ ವೇತನವನ್ನು ಪಾವತಿಸಿರುವುದಾಗಿ ತಿಳಿಸಿರುತ್ತಾರೆ. ಕೆಲವೊಂದು ಸಂದರ್ಭಗಳಲ್ಲಿ ಅಧಿಕಾರಿ/ನೌಕರರು ತಮ್ಮ ಸ್ವಹಸ್ತ ಖರ್ಚು ಮಾಡಿರುವ ಸಂಬಂಧ ವೋಚರ್‌ಗಳ ಮೂಲಕ ಚೆಕ್ಕನ್ನು ಪಡೆಯಲಾಗಿರುತ್ತದೆಂದು ತಿಳಿಸಿರುತ್ತಾರೆ.

ಮೇಲ್ಕಂಡ ಅಧಿಕಾರಿಗಳ ವಿವರಣೆಗೆ ಪೂರಕವಾಗಿ ಅವರುಗಳು ವಿಭಾಗ ಮಟ್ಟದಲ್ಲಿ ನಿರ್ವಹಿಸಲಾದ ವಹಿಯ ಪ್ರತಿಯನ್ನು ಒಗಿಸಿದ್ದಾರೆ. ಸದರಿ ದಾಖಲೆ ಪ್ರಕಾರ ವಿಭಾಗ ಮಟ್ಟದಲ್ಲಿ ಮತ್ತು ಅಧೀಕ್ಷಕ ಅಭಿಯಂತರರ ಮಟ್ಟದಲ್ಲಿ ಅನುಮೋದನೆಗೊಂಡ ಕಾರ್ಯಕ್ರಮಗಳನ್ನು ತೋರಿಸಲಾಗಿರುತ್ತದೆ. ಜೊತೆಗೆ ಸರ್ಕಾರದ ಪತ್ರ ಸಂಖ್ಯೆ: ಸನೀಇ 63 ಆವಿಸಂ 06 ದಿನಾಂಕ: 15.3.06 ಪ್ರತಿಯನ್ನು ಒದಗಿಸಿರುತ್ತಾರೆ. 2005-06ನೇ ಸಾಲಿಗೆ ಬಳ್ಳಾರಿ ವಿಭಾಗಕ್ಕೆ ಕ್ರಿಯಾ ಯೋಜನೆಯಡಿ ಒಟ್ಟು 79.50 ಲಕ್ಷ ಮಾತ್ರ ಮಂಜೂರಾಗಿರುವುದಾಗಿ ಕಂಡುಬರುತ್ತದೆ. ಇದಲ್ಲದೇ ಇವರ ವಿರುದ್ಧ ಅಭಿಯೋಗಗೊಳಿಸುವ 142 ಫರ್ಮುಗಳ ಕೊಟೇಷನ್ ಪ್ರಸ್ತಾವನೆಗೆ ರೂ.15,000/-ಕ್ಕಿಂತ ಮೇಲ್ಪಟ್ಟ ಖರ್ಚುಗಳನ್ನು ಸಹ ಅಧೀಕ್ಷಕ ಅಭಿಯಂತರ ಆದೇಶ ಸಂಖ್ಯೆ:ಅಅ/ಸನೀವೃ/ಗು/ಸಿ-4/200/ಸಿ-4 (ದಿನಾಂಕ ಇಲ್ಲ) ಕ್ರಮಬದ್ಧಗೊಳಿಸುವುದನ್ನು ಸಹ ಇವರ ವಿವರಣೆಯಲ್ಲಿ ತಿಳಿಸಿರುವುದು ಕಂಡುಬರುತ್ತದೆ. 2005-06ರಲ್ಲಿ ಲೆಕ್ಕ ಶೀರ್ಷಿಕೆ 2702ರಡಿ 103 ಲಕ್ಷ ಅನುದಾನವನ್ನು ಅಂದಾಜು ಪಟ್ಟಿಯು ಇಲ್ಲದೇ ಪಾವತಿಸಿರುವುದಾಗಿ ಮೂಲ ತಪಾಸಣಾ ವರದಿಯಲ್ಲಿ ತಿಳಿಸಿರುವುದು ಸಹ ಸರಿಯಲ್ಲವೆಂದು ಸ್ಪಷ್ಟಪಡುತ್ತದೆ. ವಾಸ್ತವವಾಗಿ ಈ ವಿಭಾಗಕ್ಕೆ ರೂ.79.50 ಲಕ್ಷ ಅನುದಾನದ ಕ್ರಿಯಾ ಯೋಜನೆ ಮಾತ್ರ ಅನುಮೋದನೆಯಾಗಿರುತ್ತದೆ. ಈ ಪೈಕಿ ಖರ್ಚು ಮಾಡಿದ ಅನುದಾನನ್ನು ಸಹ ಅವರ ವಿವರಣೆಯಲ್ಲಿ ತಿಳಿಸಿರುವುದು ಕಂಡುಬರುತ್ತದೆ.

ಮೇಲ್ಕಂಡಂತೆ ಆರೋಪಿತರ ವಿವರಣೆಯನ್ನು ಮತ್ತು ಲಭ್ಯವಿರುವ ಸಾಕ್ಷ್ಯಾಧಾರಗಳನ್ನು ಪರಿಶೀಲಿಸಲಾಗಿ ಇವರುಗಳ ಮೇಲಿನ ಆರೋಪಗಳು ಬಹಳ ಮಟ್ಟಿಗೆ ದುರ್ಬಲವಾಗುವುದು ಮೇಲ್ನೋಟಕ್ಕೆ ಕಂಡುಬರುತ್ತದೆ. ಆದುದರಿಂದ ಈ ಪ್ರಕರಣದಲ್ಲಿ ಮುಂದಿನ ವಿಚಾರಣೆಯನ್ನು ಕೈಗೊಳ್ಳುವುದರಿಂದ ಯಾವುದೇ ಪ್ರಯೋಜನವಾಗಲಾರದು ಎಂದು ಸರ್ಕಾರವು ಭಾವಿಸಿ, ಈ ಕೆಳಗಿನಂತೆ ಆದೇಶಿಸಿರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 23 ಸೇಇವಿ 2006, ಬೆಂಗಳೂರು, ದಿನಾಂಕ: 2ನೇ ನವೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಈ ಕೆಳಕಂಡ ಅಧಿಕಾರಿ/ನೌಕರರ ವಿರುದ್ಧ ಪ್ರಸ್ತಾಪಿಸಲಾಗಿದ್ದ ಶಿಸ್ತಿನ ಕ್ರಮವನ್ನು ಕೈಬಿಡಲಾಗಿದೆ.

1. ಶ್ರೀ ಕೆ. ಕಲೀಂ ಅಹಮದ್, ಕಾರ್ಯಪಾಲಕ ಇಂಜಿನಿಯರ್ (ನಿವೃತ್ತ)
2. ಶ್ರೀ ವಿ.ಹೆಚ್. ಫಜಲುಲ್ಲಾ, ಸಹಾಯಕ ಇಂಜಿನಿಯರ್,
3. ಶ್ರೀ ಗೋಪಾಲ್, ಲೆಕ್ಕಾಧೀಕ್ಷಕರು,

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್. 1581

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಸಹಕಾರ ಸಚಿವಾಲಯ

**ವಿಷಯ:** ಬೆಂಗಳೂರು ಹಣ್ಣು ಮತ್ತು ತರಕಾರಿಗಳ (ವಿಶೇಷ) ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಮಂಜೂರಾದ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಸಿಎಂಡಬ್ಲ್ಯೂ/138/ಎಂಆರ್‌ಇ/89 ದಿನಾಂಕ: 6.10.1999.
2. ಸರ್ಕಾರದ ಆದೇಶ ಸಂಖ್ಯೆ:ಸಇ 272 ಮಾಇಸೇ/2005 ದಿನಾಂಕ: 2.2.2005.
3. ಆಯುಕ್ತರು, ಕೃಷಿ ಮಾರಾಟ ಇಲಾಖೆ, ಬೆಂಗಳೂರುರವರ ಪತ್ರ ಸಂಖ್ಯೆ:ಕೃಮಾಇ/236/ಸಿಬ್ಬಂದಿ-1(ಸಿ)06 ದಿನಾಂಕ: 14.8.2006.

**ಪ್ರಸ್ತಾವನೆ:**

ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ಆದೇಶದಲ್ಲಿ ಬೆಂಗಳೂರು ಹಣ್ಣು ಮತ್ತು ತರಕಾರಿಗಳ (ವಿಶೇಷ) ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಒಟ್ಟು 30 ಹುದ್ದೆಗಳನ್ನು ಸೃಷ್ಟಿಸಲು ಸರ್ಕಾರದ ಮಂಜೂರಾತಿ ನೀಡಲಾಗಿತ್ತು. ತದನಂತರ, ಸದರಿ ಹುದ್ದೆಗಳನ್ನು ವಿವಿಧ ಆದೇಶಗಳ ಮೂಲಕ ಕಾಲಕಾಲಕ್ಕೆ ತಾತ್ಕಾಲಿಕವಾಗಿ ಮುಂದುವರೆಸಲಾಗಿ, ಮೇಲೆ ಓದಲಾದ (2) ರಲ್ಲಿನ ದಿನಾಂಕ: 2.2.2005ರ ಆದೇಶದಲ್ಲಿ ಸದರಿ ಹುದ್ದೆಗಳ ಅವಧಿಯನ್ನು **ದಿನಾಂಕ: 30.9.2006 ರವರೆಗೆ ವಿಸ್ತರಿಸಿ ಮಂಜೂರಾತಿ ನೀಡಲಾಗಿತ್ತು. ಸದರಿ ಹುದ್ದೆಗಳನ್ನು ದಿನಾಂಕ:1.10.2006 ರಿಂದ ಖಾಯಂಗೊಳಿಸಲು ಅಥವಾ ಮುಂದಿನ 2 ವರ್ಷಗಳ ಅವಧಿಗೆ ಮುಂದುವರೆಸಲು ಕೃಷಿ ಮಾರಾಟ ಇಲಾಖೆಯ ಆಯುಕ್ತರು ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಪ್ರಸ್ತಾಪಿಸಿರುತ್ತಾರೆ. ಈ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ.**

**ಸರ್ಕಾರದ ಆದೇಶ ಸಂಖ್ಯೆ:ಸಇ 297 ಮಾಇಸೇ 2006, ಬೆಂಗಳೂರು, ದಿನಾಂಕ: 25ನೇ ಅಕ್ಟೋಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಬೆಂಗಳೂರು ಹಣ್ಣು ಮತ್ತು ತರಕಾರಿಗಳ (ವಿಶೇಷ) ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಮಂಜೂರಾದ ಈ ಕೆಳಕಂಡ ಹುದ್ದೆಗಳನ್ನು ತಾತ್ಕಾಲಿಕವಾಗಿ ದಿನಾಂಕ: 1.10.2006 ರಿಂದ 30.9.2007 ರವರೆವಿಗೆ ಒಂದು ವರ್ಷದ ಅವಧಿಗೆ ಮುಂದುವರಿಸಿದೆ.

| ಕ್ರ. ಸಂ. | ಹುದ್ದೆಗಳ ಪದನಾಮ | ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ |
|---|---|---|---|
| 1 | ಕಾರ್ಯದರ್ಶಿ | 10620-14960 | 1 |
| 2 | ಹೆಚ್ಚುವರಿ ಕಾರ್ಯದರ್ಶಿ | 9580-14200 | 1 |
| 3 | ಸಹಾಯಕ ಕಾರ್ಯದರ್ಶಿ | 6000-11200 | 2 |
| 4 | ಮಾರುಕಟ್ಟೆ ಅಧಿಕಾರಿ | 5575-10620 | 1 |
| 5 | ಆಂತರಿಕ ಲೆಕ್ಕ ಪರಿಶೋಧಕರು | 5200-9580 | 1 |
| 6 | ಲೆಕ್ಕಾಧೀಕ್ಷಕರು | 5200-9580 | 2 |
| 7 | ಲೆಕ್ಕಿಗ | 3850-7050 | 1 |
| 8 | ಮಾರುಕಟ್ಟೆ ಮೇಲ್ವಿಚಾರಕ ದರ್ಜೆ-1 | 5200-9580 | 4 |
| 9 | ಮಾರುಕಟ್ಟೆ ಮೇಲ್ವಿಚಾರಕ ದರ್ಜೆ-2 | 3850-7050 | 7 |
| 10 | ಪ್ರಥಮ ದರ್ಜೆ ಸಹಾಯಕರು | 3850-7050 | 4 |
| 11 | ಶೀಘ್ರಲಿಪಿಗಾರರು | 3850-7050 | 1 |
| 12 | ಬೆರಳಚ್ಚುಗಾರರು | 3000-5450 | 1 |
| 13 | ವಾಹನ ಚಾಲಕ | 3000-5450 | 2 |
| 14 | ಸಿಪಾಯಿ | 2500-3850 | 2 |
| | **ಒಟ್ಟು** | | **30** |

ಈ ಬಗ್ಗೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ ಸಂಖ್ಯೆ:"3475-ಇತರೆ-ಸಾಮಾನ್ಯ ಆರ್ಥಿಕ ಸೇವೆಗಳು-107-ಮಾರುಕಟ್ಟೆ ಕ್ರಮಪಡಿಸುವಿಕೆ-02-ಮಾರುಕಟ್ಟೆ ಸಮಿತಿಗಳು (ಯೋಜನೇತರ)"ರ ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಇ/383/ಅಂಆಸ(ಎ)/2006 ದಿನಾಂಕ: 29.9.2006 ಮತ್ತು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ/01/ಟಿಎಫ್‌ಟಿ/96 ದಿನಾಂಕ:10.7.1996ರಲ್ಲಿ ಆರ್ಥಿಕ ಇಲಾಖೆಯು ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಪ್ರತ್ಯಾಧಿಕಾರದ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸಾಂಬಶಿವಂ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಹಕಾರ ಇಲಾಖೆ.

ಪಿ.ಆರ್. 1582

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ವಿಜಯಕುಮಾರ ಉಪ್ಪಿನ, ವ್ಯವಸ್ಥಾಪಕರು, ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆ ಪ್ರಸ್ತುತ ಪಶುಸಂಗೋಪನಾ ಸಚಿವರ ವಿಶೇಷ ಕರ್ತವ್ಯಾಧಿಕಾರಿ ಇವರ ಗುತ್ತಿಗೆ ಆಧಾರದ ನೇಮಕಾತಿಯ ಷರತ್ತು ಹಾಗೂ ನಿಬಂಧನೆಗಳು.

**ಓದಲಾಗಿದೆ:** ಅಧಿಸೂಚನೆ ಸಂಖ್ಯೆ: ಸಿಆಸುಇ 338 ಸಆಸೇ 2006, ದಿನಾಂಕ: 5.10.2006.

**ಪ್ರಸ್ತಾವನೆ:**

ಮೇಲೆ ಓದಲಾದ ಅಧಿಸೂನೆಯಲ್ಲಿ ಶ್ರೀ ವಿಜಯಕುಮಾರ ಉಪ್ಪಿನ, ವ್ಯವಸ್ಥಾಪಕರು, ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆ ಇವರನ್ನು ದಿನಾಂಕ: 12.7.2006 ರಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳ ನಿಯಮ 15 (i) (iii) ರನ್ವಯ ಪಶುಸಂಗೋಪನಾ ಸಚಿವರ ವಿಶೇಷ ಕರ್ತವ್ಯಾಧಿಕಾರಿಯಾಗಿ ಗುತ್ತಿಗೆ ಆಧಾರದ ಮೇಲೆ ನೇಮಿಸಲಾಗಿದೆ. ಅಧಿಕಾರಿಯವರ ಗುತ್ತಿಗೆ ಆಧಾರದ ನೇಮಕಾತಿಯ ಷರತ್ತು ಹಾಗೂ ನಿಬಂಧನೆಗಳನ್ನು ನಿಗದಿಪಡಿಸುವ ಅಗತ್ಯತೆಯನ್ನು ಮನಗಂಡು ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 338 ಸಆಸೇ 2006, ಬೆಂಗಳೂರು, ದಿನಾಂಕ: 3ನೇ ನವೆಂಬರ್ 2006**

ಪಶುಸಂಗೋಪನಾ ಸಚಿವರ ವಿಶೇಷ ಕರ್ತವ್ಯಾಧಿಕಾರಿ ಹುದ್ದೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳ ನಿಯಮ 15 (i) (iii) ರನ್ವಯ ಗುತ್ತಿಗೆ ಆಧಾರದ ಮೇಲೆ ನೇಮಕಗೊಂಡಿರುವ ಶ್ರೀ ವಿಜಯಕುಮಾರ ಉಪ್ಪಿನ ರವರ ಗುತ್ತಿಗೆ ಆಧಾರದ ನೇಮಕಾತಿಯ ನಿಬಂಧನೆ ಹಾಗೂ ಷರತ್ತುಗಳನ್ನು ಈ ಆದೇಶದ ಅನುಬಂಧದಲ್ಲಿ ವಿವರಿಸಲಾಗಿದೆ.

ಈ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ 7 ದಿನಗಳ ಒಳಗಾಗಿ 50.00 (ಐವತ್ತು) ರೂಪಾಯಿಗಳ ಮೌಲ್ಯದ ಛಾಪಾ ಕಾಗದದಲ್ಲಿ ಸದರಿ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನು ಒಳಗೊಂಡಿರುವ ಕರಾರು ಪತ್ರವನ್ನು ಕ್ರಮಬದ್ಧ ರೀತಿಯಲ್ಲಿ ಸದರಿ ನೌಕರರಿಂದ ಬರೆಯಿಸಿಕೊಳ್ಳತಕ್ಕದ್ದು.

ಸದರಿ ಸರ್ಕಾರದ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1942 ವೆಚ್ಚ-5/2006 ದಿನಾಂಕ: 2.11.2006 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

**ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,**

**ಎಚ್.ಆರ್. ನಾಗೇಂದ್ರ**

**ಸರ್ಕಾರದ ಅಧೀನ ಕಾರ್ಯದರ್ಶಿ,**

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).**

**Annexure to Government Order No. DPAR 338 SGO 2006, Dated: 3rd November 2006**

Sri Vijayakumar Uppin is appointed on contract basis on the following terms and conditions:-

**1. PERIOD:**

The period of contract of Shri Vijayakumar Uppin is for the period to be coterminus with the office of the Minister for Animal Husbandry or so long as the service of Shri Vijayakumar Uppin are required in the said office, whichever is earlier.

**2. COMMENCEMENT AND END OF CONTRACT:**

The contract shall commence on the date on which the official takes charge of the post under the Government and ends on the date on which he hands over charge of the post under the Government.

**3. PAY & OTHER ALLOWANCES:**

During the period of contract, Shri Vijayakumar Uppina shall be entitled to pay including DA/HRA/CCA admissible to him in his Parent Organisation. He shall be entitled to special pay admissible to the post in the Minister's establishment. However he shall not be entitled to any other deputation or foreign service allowance. He will also not be eligible for special allowances like lunch allowance/overtime allowance / bonus / Ex-gratia etc., attached to the post or attached to the parent organization.

**4. LEAVE RULES:**

He will be governed by the Leave Rules applicable to him in his parent organisation.

**5. LEAVE SALARY CONTRIBUTION:**

The Government shall pay Leave Salary contribution at the rate of 11% of Pay

**6. P.F. CONTRIBUTIONS:**

12% of basic pay plus D.A. shall be deducted from salry of the emloyees every month and remitted to K.S.F.C. together with employer's contribution at 12% of basic pay plus D.A.

**7. CRATUITY FUND CONTRIBUTION:**

Government shall pay contribution towards service gratuity at the rate of 15 days salary (Basic pay + DA) for every completed year of service.

**8. MEDICAL CONCESSION:**

The official shall be entitled to the medical attendance as per the Karnataka Government Servants (Medical Attendance) Rules 1963.

9. He shall perform the functions of Special Officer and attend to all work entrusted to him from time to time by the said stablishment.

10. He shall perform his duties diligently and he shall maintain strict secrecy in respect of official information which he comes to know in the course of his duties.

11. He shall be liable to reimburse to Government all the losses which the Government may sustain due to misconduct of any sort on his part.

**H.R. NAGENDRA**

P.R. 1583

Under Secretary to Government,
Department of Personnel and Administrative Reforms (Services-2)

**ವಿಷಯ:** 7 ಜನ ಜಿಲ್ಲಾ ನ್ಯಾಯಾಧೀಶರುಗಳ ಸೇವೆಯನ್ನು 58 ವರ್ಷಗಳ ಸೇವೆಯ ನಂತರ 30 ವರ್ಷಗಳವರೆಗೆ ಮುಂದುವರಿಸುವ ಬಗ್ಗೆ.

**ಓದಲಾಗಿದೆ:** ರಿಜಿಸ್ಟ್ರಾರ್ ಜನರಲ್ ಕರ್ನಾಟಕ ಉಚ್ಛ ನ್ಯಾಯಾಲಯ, ಬೆಂಗಳೂರು ಇವರ ಪತ್ರ ಸಂ:ಆರ್‌ಓಸಿ.ಜಿಓಬಿ(1) 296:2005, ದಿನಾಂಕ:7.10.2006.

**ಪ್ರಸ್ತಾವನೆ:**

ಜಿಲ್ಲಾ ನ್ಯಾಯಾಧೀಶರುಗಳ ಸೇವೆಯನ್ನು 58 ವರ್ಷದ ನಂತರವೂ ಮುಂದುವರಿಸುವ ಬಗ್ಗೆ ಉಚ್ಛ ನ್ಯಾಯಾಲಯದ ಸ್ಕ್ರೀನಿಂಗ್ ಸಮಿತಿ ಮೌಲ್ಯಮಾಪನ ಮಾಡಿ 58 ವರ್ಷದ ನಂತರವೂ ಕರ್ತವ್ಯ ನಿರ್ವಹಿಸಲು ಅರ್ಹರೆಂದು ತೀರ್ಮಾನಿಸಿದ್ದಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 95(ಎ)ರ ಅನ್ವಯ 58 ವರ್ಷಗಳ ವಯಸ್ಸಿನ ನಂತರ 60 ವರ್ಷಗಳವರೆಗೆ ಮುಂದುವರಿಸಬಹುದಾಗಿದೆ. ಅದರಂತೆ ಕೆಳಕಂಡ 7 ಜಿಲ್ಲಾ ನ್ಯಾಯಾಧೀಶರುಗಳ ಗೌಪ್ಯ ವರದಿ ಹಾಗೂ ಇತರ ದಾಖಲೆಗಳನ್ನು ಪರಿಶೀಲಿಸಿ ಅವರುಗಳನ್ನು 58 ವರ್ಷಗಳ ನಂತರ ಅಂದರೆ 60 ವರ್ಷಗಳವರೆಗೆ ಮುಂದುವರಿಸಲು ಶಿಫಾರಸ್ಸು ಮಾಡಿದಂತೆ ಉಚ್ಛ ನ್ಯಾಯಾಲಯದ ಪೂರ್ಣ ಪೀಠವು ಅನುಮೋದಿಸಿರುವುದಾಗಿ ಮೇಲೆ ಓದಲಾದ **ದಿ:17.10.2006ರ ಪತ್ರದಲ್ಲಿ ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಛ ನ್ಯಾಯಾಲಯ, ಬೆಂಗಳೂರು ಇವರು ತಿಳಿಸಿ ಕೆಳಕಂಡ 7 ಜನ ಜಿಲ್ಲಾ ನ್ಯಾಯಾಧೀಶರುಗಳು, ಅವರುಗಳ ಹೆಸರಿನ ಮುಂದೆ ಸೂಚಿಸಿರುವ ದಿನಾಂಕದಂದು 58 ವರ್ಷಗಳ ವಯೋಮಿತಿಯನ್ನು ಪೂರೈಸಲಿದ್ದು ಇವರುಗಳ ಸೇವೆಯನ್ನು 58 ವರ್ಷಗಳ ನಂತರ 60 ವರ್ಷದವರೆಗೆ ಸೇವೆಯಲ್ಲಿ ಮುಂದುವರಿಸಲು ಸರ್ಕಾರದ ಆದೇಶ ಕೋರಿರುತ್ತಾರೆ.**

| ಕ್ರ. ಸಂ. | ಜಿಲ್ಲಾ ನ್ಯಾಯಾಧೀಶರುಗಳ ಹೆಸರು | 58 ವರ್ಷಗಳ ವಯೋಮಿತಿಯನ್ನು ಪೂರೈಸಲಿರುವ ದಿನಾಂಕ |
|---|---|---|
| 1. | ಶ್ರೀ ಎ.ಎಲ್. ಪೂಜಾರ್ | 30.11.2006 |
| 2. | ಶ್ರೀ ಸಿ.ಎಸ್. ನಂಜುಂಡಪ್ಪ | 31.12.2006 |
| 3. | ಶ್ರೀ ಬಿ. ಶ್ರೀರಾಮ ರೆಡ್ಡಿ | 31.12.2006 |
| 4. | ಶ್ರೀ ಎ.ಎಸ್. ಪಾಟೀಲ್ | 31.12.2006 |
| 5. | ಶ್ರೀ ಮಹಿಪಾಲ್ ದೇಸಾಯಿ | 31.12.2006 |
| 6. | ಶ್ರೀ ವಿ.ಬಿ. ಶಿರಿಯಣ್ಣವರ್ | 31.12.2006 |
| 7. | ಶ್ರೀ ಆರ್. ವೆಂಕಟೇಶ್ | 31.01.2007 |

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ:ಸಿಆಸುಇ.75 ಸೇಉನ್ಯಾ 2006, ಬೆಂಗಳೂರು, ದಿನಾಂಕ: 4ನೇ ನವೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೆಳಕಂಡ 7 ಜನ ಜಿಲ್ಲಾ ನ್ಯಾಯಾಧೀಶರುಗಳ ಸೇವೆಯನ್ನು ಅವರುಗಳ ಹೆಸರಿನ ಮುಂದೆ ನಮೂದಿಸಿರುವ ದಿನಾಂಕಗಳಂದು ಅವರು 58 ವರ್ಷಗಳ ವಯೋಮಿತಿ ಪೂರೈಸಿದ ನಂತರವೂ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 95(ಎ)ರನ್ವಯ 60 ವರ್ಷಗಳ ವಯೋಮಿತಿಯವರೆಗೆ ಸೇವೆಯಲ್ಲಿ ಮುಂದುವರಿಸಲು ಸರ್ಕಾರವು ಆದೇಶಿಸಿದೆ.

| ಕ್ರ. ಸಂ. | ಜಿಲ್ಲಾ ನ್ಯಾಯಾಧೀಶರುಗಳ ಹೆಸರು | 58 ವರ್ಷಗಳ ವಯೋಮಿತಿಯನ್ನು ಪೂರೈಸಲಿರುವ ದಿನಾಂಕ |
|---|---|---|
| 1. | ಶ್ರೀ ಎ.ಎಲ್. ಪೂಜಾರ್,<br>32ನೇ ಅಡಿಷನಲ್ ಸಿಟಿ ಸಿವಿಲ್ ಜಡ್ಜ್ ಬೆಂಗಳೂರು ಸಿಟಿ. | 30.11.2006 |
| 2. | ಶ್ರೀ ಸಿ.ಎಸ್. ನಂಜುಂಡಪ್ಪ,<br>25ನೇ ಅಡಿಷನಲ್ ಸಿಟಿ ಸಿವಿಲ್ ಮತ್ತು ಸೆಷನ್ಸ್ ಜಡ್ಜ್,<br>ಬೆಂಗಳೂರು ಸಿಟಿ. | 31.12.2006 |
| 3. | ಶ್ರೀ ಬಿ. ಶ್ರೀರಾಮ ರೆಡ್ಡಿ,<br>ಪ್ರಿಸೈಡಿಂಗ್ ಆಫೀಸರ್, ಫಾಸ್ಟ್ ಟ್ರಾಕ್ ಕೋರ್ಟ್-6,<br>ಬೆಂಗಳೂರು ಸಿಟಿ. | 31.12.2006 |
| 4. | ಶ್ರೀ ಎ.ಎಸ್. ಪಾಟೀಲ್,<br>14ನೇ ಅಡಿಷನಲ್ ಸಿಟಿ ಸಿವಿಲ್ ಮತ್ತು ಸೆನ್ಸ್ ಜಡ್ಜ್,<br>ಬೆಂಗಳೂರು ಸಿಟಿ. | 31.12.2006 |
| 5. | ಶ್ರೀ ಮಹಿಪಾಲ್ ದೇಸಾಯಿ,<br>ಪ್ರದಾನ ಜಿಲ್ಲಾ ಮತ್ತು ಸೆಷನ್ಸ್ ಜಡ್ಜ್, ಕೋಲಾರ. | 31.12.2006 |
| 6. | ಶ್ರೀ ವಿ.ಬಿ. ಶಿರಿಯಣ್ಣವರ್,<br>ಜಿಲ್ಲಾ ಮತ್ತು ಸೆಷನ್ಸ್ ಜಡ್ಜ್, ಶಿವಮೊಗ್ಗ. | 31.12.2006 |
| 7. | ಶ್ರೀ ಆರ್. ವೆಂಕಟೇಶ್,<br>ಜಿಲ್ಲಾ ಮತ್ತು ಸೆಷನ್ಸ್ ಜಡ್ಜ್ ಕೊಡಗು, ಮಡಿಕೇರಿ. | 31.01.2007 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 1584

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

## ಇಂಧನ ಸಚಿವಾಲಯ

**ವಿಷಯ:** ಮೆ:: ದಾವಣಗೆರೆ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯ 0.5 ಮೆಗಾ ವ್ಯಾಟ್ ಸಾಮರ್ಥ್ಯದ ಮರದೂರು ಕಿರು-ಜಲ ವಿದ್ಯುತ್ ಯೋಜನೆನ್ನು 2.00 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಡಿಇ 131 ಎನ್‌ಸಿಇ 2001 ದಿನಾಂಕ: 8.10.2001.

2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆ.ಆರ್.ಇ.ಡಿ/06/ಮರದೂರು/2006/2145 ದಿನಾಂಕ: 7.10.2006.

**ಪ್ರಸ್ತಾವನೆ:**

ಓದಲಾದ (1)ರ ಆದೇಶದಲ್ಲಿ ಮೆ:: ದಾವಣಗೆರೆ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಮೈಸೂರು ಜಿಲ್ಲೆಯ ಹುಣಸೂರು ತಾಲ್ಲೂಕಿನ ಮರದೂರು ಗ್ರಾಮದ ಬಳಿ ಲಕ್ಷ್ಮಣತೀರ್ಥ ನದಿಗೆ ಅಡ್ಡಲಾಗಿ 0.5 ಮೆಗಾ ವ್ಯಾಟ್ ಸಾಮರ್ಥ್ಯದ ಮರದೂರು ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಓದಲಾದ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಯೋಜನಾ ಸ್ಥಳದಲ್ಲಿ ಇನ್ನೂ ಹೆಚ್ಚಿನ ವಿದ್ಯುತ್ ಉತ್ಪಾದಿಸಬಹುದೆಂದು ಅಭಿವೃದ್ಧಿದಾರರು ವಿವರವಾದ ಸರ್ವೇಕ್ಷಣೆ ಮಾಡಿ ಡಿ.ಪಿ.ಆರ್. ಸಿದ್ಧಪಡಿಸಿದ್ದು ಅವರ **ಕೋರಿಕೆಯ ಮೇರೆಗೆ ಮರದೂರು ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 0.5 ಮೆಗಾ ವ್ಯಾಟ್‌ನಿಂದ 2.00 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಲು ಶಿಫಾರಸ್ಸು ಮಾಡಿರುತ್ತಾರೆ.**

**ಮೇಲಿನ ಶಿಫಾರಸ್ಸನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:-**

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 400 ಎನ್‌ಸಿಇ 2006, ಬೆಂಗಳೂರು, ದಿನಾಂಕ: 2ನೇ ನವೆಂಬರ್ 2006**

ಸರ್ಕಾರವು ಮೆ:: ದಾವಣಗೆರೆ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಮೈಸೂರು ಜಿಲ್ಲೆಯ ಹುಣಸೂರು ತಾಲ್ಲೂಕಿನ ಮರದೂರು ಗ್ರಾಮದ ಬಳಿ ಲಕ್ಷ್ಮಣತೀರ್ಥ ನದಿಗೆ ಅಡ್ಡಲಾಗಿ ಹಂಚಿಕೆ ಮಾಡಿರುವ 0.5 ಮೆಗಾ ವ್ಯಾಟ್ ಸಾಮರ್ಥ್ಯದ ಮರದೂರು ಕಿರು ಜಲ ವಿದ್ಯುತ್ ಯೋಜನೆಯನ್ನು ಜಲ ಸಂಪನ್ಮೂಲ ಅಭಿವೃದ್ಧಿ ಇಲಾಖೆಯಿಂದ ಅನುಮೋದನೆ ಪಡೆದುಕೊಳ್ಳಬೇಕೆಂಬ ಷರತ್ತಿನೊಂದಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ.

ಓದಲಾದ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್.ಬಿ.ಕೃಷ್ಣಪ್ಪನವರ್**

ಪಿ.ಆರ್. 1585

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**ವಿಷಯ:** ಮೆ:: ದಾವಣಗೆರೆ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯ 0.5 ಮೆಗಾ ವ್ಯಾಟ್ ಸಾಮರ್ಥ್ಯದ ಕಟ್ಟೆಮರಳವಾಡಿ ಕಿರು-ಜಲ ವಿದ್ಯುತ್ ಯೋಜನೆಯನ್ನು 1.00 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಡಿಇ 131 ಎನ್‌ಸಿಇ 2001 ದಿನಾಂಕ: 8.10.2001.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆ.ಆರ್.ಇ.ಡಿ/06/ಕಟ್ಟೆಮರಳವಾಡಿ/2006/2146 ದಿನಾಂಕ: 7.10.2006.

**ಪ್ರಸ್ತಾವನೆ:**

ಓದಲಾದ (1)ರ ಆದೇಶದಲ್ಲಿ ಮೆ:: ದಾವಣಗೆರೆ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಮೈಸೂರು ಜಿಲ್ಲೆಯ ಹುಣಸೂರು ತಾಲ್ಲೂಕಿನ ಮರದೂರು ಗ್ರಾಮದ ಬಳಿ ಲಕ್ಷ್ಮಣತೀರ್ಥ ನದಿಗೆ ಅಡ್ಡಲಾಗಿ 0.5 ಮೆಗಾ ವ್ಯಾಟ್ ಸಾಮರ್ಥ್ಯದ ಕಟ್ಟೆಮರಳವಾಡಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಓದಲಾದ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಯೋಜನಾ ಸ್ಥಳದಲ್ಲಿ ಇನ್ನೂ ಹೆಚ್ಚಿನ ವಿದ್ಯುತ್ ಉತ್ಪಾದಿಸಬಹುದೆಂದು ಅಭಿವೃದ್ಧಿದಾರರು ವಿವರವಾದ ಸರ್ವೇಕ್ಷಣೆ ಮಾಡಿ ಡಿ.ಪಿ.ಆರ್. ಸಿದ್ಧಪಡಿಸಿದ್ದು ಅವರ ಕೋರಿಕೆಯ ಮೇರೆಗೆ ಮರದೂರು ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 0.5 ಮೆಗಾ ವ್ಯಾಟ್‌ನಿಂದ 1.00 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ ಶಿಫಾರಸ್ಸನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:-

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 401 ಎನ್‌ಸಿಇ 2006, ಬೆಂಗಳೂರು, ದಿನಾಂಕ: 2ನೇ ನವೆಂಬರ್ 2006**

ಸರ್ಕಾರವು ಮೆ:: ದಾವಣಗೆರೆ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಮೈಸೂರು ಜಿಲ್ಲೆಯ ಹುಣಸೂರು ತಾಲ್ಲೂಕಿನ ಕಟ್ಟೆಮರಳವಾಡಿ ಗ್ರಾಮದ ಬಳಿ ಲಕ್ಷ್ಮಣತೀರ್ಥ ನದಿಗೆ ಅಡ್ಡಲಾಗಿ ಹಂಚಿಕೆ ಮಾಡಿರುವ 0.5 ಮೆಗಾ ವ್ಯಾಟ್ ಸಾಮರ್ಥ್ಯದ ಕಟ್ಟೆ ಮರಳವಾಡಿ ಕಿರು ಜಲ ವಿದ್ಯುತ್ ಯೋಜನೆಯನ್ನು ಜಲ ಸಂಪನ್ಮೂಲ ಅಭಿವೃದ್ಧಿ ಇಲಾಖೆಯಿಂದ ಅನುಮೋದನೆ ಪಡೆದುಕೊಳ್ಳಬೇಕೆಂಬ ಷರತ್ತಿನೊಂದಿಗೆ 1.00 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ.

ಓದಲಾದ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್.ಬಿ.ಕೃಷ್ಣಪ್ಪನವರ್**

ಪಿ.ಆರ್. 1586

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**ವಿಷಯ:** ಮೆ:: ವೆನಿಕಾ ಗ್ರೀನ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಮಾಂಡೆವಾಲ ಕಿರು-ಜಲ ವಿದ್ಯುತ್ ಯೋಜನೆಯನ್ನು 1.75 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಇಂಇ 382 ಎನ್‌ಸಿಇ 2004 ದಿನಾಂಕ: 21.12.2004.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆ.ಆರ್.ಇ.ಡಿ/06/ಮಾಂಡೆವಾಲ/2006/2017 ದಿನಾಂಕ: 7.10.2006.

**ಪ್ರಸ್ತಾವನೆ:**

ಓದಲಾದ (1)ರ ಆದೇಶದಲ್ಲಿ ಮೆ:: ವೆನಿಕಾ ಗ್ರೀನ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಗುಲ್ಬರ್ಗಾ ಜಿಲ್ಲೆಯ ಜೇವರ್ಗಿ ತಾಲ್ಲೂಕಿನ ಮಾಂಡೆವಾಲ ಗ್ರಾಮದ ಬಳಿ ಜೇವರ್ಗಿ ಬ್ರಾಂಚ್ ಕೆನಾಲ್‌ನ ಡಿಸ್ಟ್ರಿಬ್ಯೂಟರಿ ಸಂಖ್ಯೆ: 12ರ ಸರಪಳಿ 3.5 ಕಿ.ಮೀ. ನಿಂದ 5.5 ಕಿ.ಮೀ. ಮಧ್ಯದಲ್ಲಿ 700 ಕಿಲೋ ಯಾಟ್ ಹಾಗೂ ಸರಪಳಿ 13 ಕಿ.ಮೀ. ನಿಂದ 14.75 ಕಿ.ಮೀ. ಮಧ್ಯ 300 ಕಿಲೋ ವ್ಯಾಟ್ ಸಾಮರ್ಥ್ಯದ ಒಟ್ಟು 1.00 ಮೆಗಾ ವ್ಯಾಟ್ ಸಾಮರ್ಥ್ಯದ ಮಾಂಡೆವಾಲ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಓದಲಾದ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಯೋಜನಾ **ಸ್ಥಳದಲ್ಲಿ ಇನ್ನೂ ಹೆಚ್ಚಿನ ವಿದ್ಯುತ್ ಉತ್ಪಾದಿಸಬಹುದೆಂದು ಅಭಿವೃದ್ಧಿದಾರರು ವಿವರವಾದ ಸರ್ವೇಕ್ಷಣೆ ಮಾಡಿ ಡಿ.ಪಿ.ಆರ್. ಸಿದ್ಧಪಡಿಸಿದ್ದು ಅವರ ಕೋರಿಕೆಯ ಮೇರೆಗೆ ಮಾಂಡೆವಾಲ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 1.00 ಮೆಗಾ ವ್ಯಾಟ್‌ನಿಂದ 1.75 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಲು ಶಿಫಾರಸ್ಸು ಮಾಡಿರುತ್ತಾರೆ.**

ಮೇಲಿನ ಶಿಫಾರಸ್ಸನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:-

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 417 ಎನ್‌ಸಿಇ 2006, ಬೆಂಗಳೂರು, ದಿನಾಂಕ: 8ನೇ ನವೆಂಬರ್ 2006**

ಸರ್ಕಾರವು ಮೆ:: ವೆನಿಕಾ ಗ್ರೀನ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಗುಲ್ಬರ್ಗಾ ಜಿಲ್ಲೆಯ ಜೇವರ್ಗಿ ತಾಲ್ಲೂಕಿನ ಮಾಂಡೆವಾಲ ಗ್ರಾಮದ ಬಳಿ ಜೇವರ್ಗಿ ಬ್ರಾಂಚ್ ಕೆನಾಲ್‌ನ ಡಿಸ್ಟ್ರಿಬ್ಯೂಟರಿ ಸಂಖ್ಯೆ: 12ರ ಸರಪಳಿ 3.5 ಕಿ.ಮೀ ನಿಂದ 5.5 ಕಿ.ಮೀ. ಮಧ್ಯದಲ್ಲಿ 700 ಕಿಲೋ ವ್ಯಾಟ್ ಹಾಗೂ ಸರಳಿ 13 ಕಿ.ಮೀ ನಿಂದ 14.75 ಕಿ.ಮೀ. ಮಧ್ಯ 300 ಕಿಲೋ ವ್ಯಾಟ್ ಸಾಮರ್ಥ್ಯದ ಒಟ್ಟು 1.00 ಮೆಗಾ ವ್ಯಾಟ್ ಸಾಮರ್ಥ್ಯದ ಮಂಡೆವಾಲ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಿರುವುದನ್ನು ಪುನರಾವರ್ತಿಸಿ ಹಂಚಿಕೆ ಸಾಮರ್ಥ್ಯವನ್ನು ಸರಪಳಿ 4 ಕಿ.ಮೀ. ನಿಂದ 5.2 ಕಿ.ಮೀ. ಮಧ್ಯದಲ್ಲಿ 1.0 ಮೆಗಾ ವ್ಯಾಟ್ ಹಾಗೂ ಸರಪಳಿ 8 ಕಿ.ಮೀ. ನಿಂದ 10 ಕಿ.ಮೀ. ಮಧ್ಯದಲ್ಲಿ 0.75 ಮೆಗಾ ವ್ಯಾಟ್ ಒಟ್ಟಾರೆ 1.75 ಮೆಗಾ ವ್ಯಾಟ್‌ಗೆ ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ಈ ಕೆಳಗಿನ ನಿಬಂಧನೆಗಳೊಂದಿಗೆ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ.

1. ಈ ಯೋಜನೆಯಿಂದ ನೀರಾವರಿ ಯೋಜನೆಗಳಿಗೆ ಯಾವುದೇ ದಕ್ಕೆಯಾಗಬಾರದು.

2. ಯೋಜನೆಗೆ ಜಲಸಂಪನ್ಮೂಲ ಇಲಾಖೆ, ಅರಣ್ಯ ಇಲಾಖೆ ಹಾಗೂ ಇನ್ನಿತರ ಸಂಬಂದಿತ ಇಲಾಖೆಗಳಿಂದ ಅನುಮೋದನೆ ಪಡೆದುಕೊಳ್ಳತಕ್ಕದ್ದು.

ಓದಲಾದ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್.ಬಿ.ಕೃಷ್ಣಪ್ಪನವರ್**

ಪಿ.ಆರ್. 1587

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**ವಿಷಯ:** ಮೆ:: ವೆನಿಕಾ ಹೈಡ್ರೋ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಯ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಗೊನಾಲ್ ಕಿರು ಜಲ ವಿದ್ಯುತ್ ಯೋಜನೆಯನ್ನು 6.50 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರಿ ಆದೇಶ ಸಂಖ್ಯೆ: ಇಂಇ 277 ಎನ್‌ಸಿಇ 2005 ದಿನಾಂಕ: 14.10.2005.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 250 ಎನ್‌ಸಿಇ 2006 ದಿನಾಂಕ: 24.06.2006.
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆ.ಆರ್.ಇ.ಡಿ/06/ಗೊನಾಲ್/2006/2288 ದಿನಾಂಕ: 3.11.2006.

**ಪ್ರಸ್ತಾವನೆ:**

ಓದಲಾದ (1)ರ ಆದೇಶದಲ್ಲಿ ಮೆ:: ವೆನಿಕಾ ಹೈಡ್ರೊ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಗುಲ್ಬರ್ಗಾ ಜಿಲ್ಲೆಯ ಶೋರಾಪುರ ತಾಲ್ಲೂಕಿನ ನಾಗರಾಳ ಗ್ರಾಮದ ಬಳಿ ಕೃಷ್ಣ ನದಿಯ ಉಪ ನದಿಯಾದ ದೇವಪುರ ನಾಲೆಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಅಂತರಾಳ-ನಾಗರಾಳ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಓದಲಾದ (2)ರ ಆದೇಶದಲ್ಲಿ ಸದರಿ ಕಂಪನಿಗೆ ಹಂಚಿಕೆಯಾಗಿರುವ ಸಾಮರ್ಥ್ಯವನ್ನು 2.00 ಮೆಗಾ ವ್ಯಾಟ್‌ನಿಂದ 4.00 ಮೆಗಾ ವ್ಯಾಟ್‌ಗೆ ಹೆಚ್ಚಿಸಿ ಯೋಜನೆಯ ಹೆಸರನ್ನು ಗೊನಾಲ್ ಕಿರು ಜಲ ವಿದ್ಯುತ್ ಯೋಜನೆ ಎಂದು ಬದಲಾಯಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ.

ಓದಲಾದ (3)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಯೋಜನಾ ಸ್ಥಳದಲ್ಲಿ ಇನ್ನೂ ಹೆಚ್ಚಿನ ವಿದ್ಯುತ್ ಉತ್ಪಾದಿಸಬಹುದೆಂದು ಅಭಿವೃದ್ಧಿದಾರರು ವಿವರವಾದ ಸರ್ವೇಕ್ಷಣೆ ಮಾಡಿ ಡಿ.ಪಿ.ಆರ್. ಸಿದ್ಧಪಡಿಸಿದ್ದು ಅವರ ಕೋರಿಕೆಯ ಮೇರೆಗೆ ಗೊನಾಲ್ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 4.00 ಮೆಗಾ ವ್ಯಾಟ್‌ನಿಂದ 6.50 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ ಶಿಫಾರಸ್ಸನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:-

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 420 ಎನ್‌ಸಿಇ 2006, ಬೆಂಗಳೂರು, ದಿನಾಂಕ: 8ನೇ ನವೆಂಬರ್ 2006**

ಸರ್ಕಾರವು ಮೆ:: ವೆನಿಕಾ ಹೈಡ್ರೋ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಗುಲ್ಬರ್ಗಾ ಜಿಲ್ಲೆಯ ಶೋರಾಪುರ ತಾಲ್ಲೂಕಿನ ನಾಗರಾಳ ಗ್ರಾಮದ ಬಳಿ ಕೃಷ್ಣ ನದಿಯ ಉಪ ನದಿಯಾದ ದೇವಪುರ ನಾಲೆಗೆ ಅಡ್ಡಲಾಗಿ ಹಂಚಿಕೆ ಮಾಡಲಾಗಿರುವ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಗೊನಾಲ್ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು ಜಲ ಸಂಪನ್ಮೂಲ ಅಭಿವೃದ್ಧಿ ಇಲಾಖೆಯಿಂದ ಅನುಮೋದನೆ ಪಡೆದುಕೊಳ್ಳಬೇಕೆಂಬ ಷರತ್ತಿಗೊಳಪಟ್ಟು 6.50 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ.

ಓದಲಾದ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್.ಬಿ.ಕೃಷ್ಣಪ್ಪನವರ್**

ಪಿ.ಆರ್. 1588

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಕರ್ನಾಟಕ ಚಿತ್ರಕಲಾ ಪರಿಷತ್ ಬೆಂಗಳೂರು ಈ ಸಂಸ್ಥೆಗೆ ಆಡಳಿತಾಧಿಕಾರಿಯನ್ನು ನಿಯಮಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂ.ಕಂಇ 33 ಮುನೋಸೋ 2006 ದಿನಾಂಕ:13.5.2006.

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರೀ ಆದೇಶದಲ್ಲಿ ಕರ್ನಾಟಕ ಚಿತ್ರಕಲಾ ಪರಿಷತ್ ಈ ಸಂಸ್ಥೆಯ ಪರಿಸ್ಥಿತಿ ಗಂಭೀರವಾಗಿದ್ದು, ಸಂಘದಲ್ಲಿ ಎರಡು ಗುಂಪುಗಳ ನಡುವೆ ಘರ್ಷಣೆ ನಡೆಯುತ್ತಿರುವುದರಿಂದ ಪರಿಷತ್ತಿನ ಆಡಳಿತ ಸುಗಮವಾಗಿ ನಡೆಯುತ್ತಿಲ್ಲ ಎಂಬ ಅಂಶ ಸರ್ಕಾರದ ಗಮನಕ್ಕೆ ಬಂದಿದ್ದರಿಂದ ಸರ್ಕಾರವು ಸಾರ್ವಜನಿಕ ಹಿತದೃಷ್ಟಿಯಿಂದ ಕರ್ನಾಟಕ ಚಿತ್ರಕಲಾ ಪರಿಷತ್ ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ,

1960ರ ಕಲಂ 27 (a)ರ ಪ್ರಕಾರ ಸರ್ಕಾರದ ವಾರ್ತಾ, ಪ್ರವಾಸೋದ್ಯಮ ಹಾಗೂ ಯುವಜನಸೇವೆಗಳ ಇಲಾಖೆಯ ಪ್ರಧಾನ ಕಾರ್ಯದರ್ಶಿ, ಶ್ರೀಮತಿ ಎಲ್. ಶಾಂತಕುಮಾರ್ ಭಾ.ಆ.ಸೇ. ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಆಡಳಿತಾಧಿಕಾರಿಯಾಗಿ ನೇಮಕ ಮಾಡಲಾಗಿತ್ತು. ಸದರಿ ಅಧಿಕಾರಿಗಳು ದಿನಾಂಕ:9.10.2006 ರಿಂದ 4.11.2006 ರವರೆಗೆ ಗಳಿಕೆ ರಜೆಯ ಮೇಲೆ ತೆರಳಿದ್ದು ಆ ಅವಧಿಯಲ್ಲಿ ಕರ್ನಾಟಕ ಚಿತ್ರಕಲಾ ಪರಿಷತ್‌ನ ಆಡಳಿತಾಧಿಕಾರಿಯನ್ನಾಗಿ ಕಾರ್ಯದರ್ಶಿ, ಸಹಕಾರ ಇಲಾಖೆ, ಶ್ರೀ ಪಿ. ರವಿಕುಮಾರ್ ಭಾ.ಆ.ಸೇ. ಇವರನ್ನು ನೇಮಕ ಮಾಡಲು ಸರ್ಕಾರವು ನಿರ್ಧರಿಸಿದ್ದು, ಆದರಂತೆ ಈ ಕೆಳಕಂಡ ಆದೇಶ.

**ಸರ್ಕಾರೀ ಆದೇಶ ಸಂ.ಕಂಇ 33 ಮುನೋ ಸೋ 2006, ಬೆಂಗಳೂರು, ದಿನಾಂಕ: 18ನೇ ಅಕ್ಟೋಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಂಘ ನೋಂದಣಿ ಕಾಯ್ದೆ 1960ರ ಕಲಂ 27(a)ರ ಪ್ರಕಾರ ಕರ್ನಾಟಕ ಚಿತ್ರಕಲಾ ಪರಿಷತ್ ಈ ಸಂಸ್ಥೆಗೆ ಆಡಳಿತಾಧಿಕಾರಿಯಾಗಿ ನೇಮಕ ಮಾಡಲಾಗಿದ್ದ ಸರ್ಕಾರದ ವಾರ್ತಾ, ಪ್ರವಾಸೋದ್ಯಮ ಹಾಗೂ ಯುವಜನಸೇವೆಗಳ ಇಲಾಖೆಯ ಪ್ರಧಾನ ಕಾರ್ಯದರ್ಶಿ, ಶ್ರೀಮತಿ ಎಲ್. ಶಾಂತಕುಮಾರಿ ಭಾ.ಆ.ಸೇ. ಇವರ ಬದಲಿಗೆ ಕಾರ್ಯದರ್ಶಿ, ಸಹಕಾರ ಇಲಾಖೆ, ಶ್ರೀ ಪಿ. ರವಿಕುಮಾರ್ ಭಾ.ಆ.ಸೇ ಇವರನ್ನು ದಿನಾಂಕ: 9.10.2006 ರಿಂದ 4.11.2006 ರವರೆಗೆ ಮಾತ್ರ ಕರ್ನಾಟಕ ಚಿತ್ರಕಲಾ ಪರಿಷತ್ ಈ ಸಂಸ್ಥೆಗೆ ಆಳಿತಾಧಿಕಾರಿಯಾಗಿ ನೇಮಕ ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1589

**ಶಿವಲಿಂಗ**

ಪೀಠಾಧಿಕಾರಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ:** ಶ್ರೀಮತಿ ಉಷಾಸುರೇಶ್, ನಿರ್ದೇಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ ಅವರಿಗೆ (ದಿನಾಂಕ:20.11.2006 ರಿಂದ 24.11.2006ರವರೆಗೆ) ಗೋವಾ ರಾಜ್ಯ ಪ್ರವಾಸ ಕೈಗೊಳ್ಳಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ ಅವರ ಪತ್ರ ಸಂಖ್ಯೆ: ಎಆರ್‌ಎಸ್ 22 ಎನ್‌ಎಐ 2006 ದಿನಾಂಕ: 31.7.006 ಮತ್ತು 7.10.2006.

**ಪ್ರಸ್ತಾವನೆ:**

ನಿರ್ದೇಶಕರು, ರಾಜ್ಯ ಪತ್ರಾಗಾರ ಇಲಾಖೆ ಅವರು ಮೇಲೆ ಓದಲಾದ ದಿನಾಂಕ:31.7.2006ರ ಪತ್ರದಲ್ಲಿ ಗೋವಾ ರಾಜ್ಯ ಪತ್ರಾಗಾರಕ್ಕೆ ಭೇಟಿ ನೀಡಿ ಅಲ್ಲಿ ಕರ್ನಾಟಕಕ್ಕೆ ಸಂಬಂಧಪಟ್ಟ ಹೈದರಾಲಿ ಹಾಗೂ ಟಿಪ್ಪುಸುಲ್ತಾನ್ ಆಡಳಿತಕ್ಕೆ ಸಂಬಂಧಪಟ್ಟ ಪರ್ಷಿಯನ್ ದಾಖಲೆ, ದಾಖಲಾತಿಗಳನ್ನು ಪಡೆಯಲು ದಿನಾಂಕ:20.11.2006 ರಿಂದ 24.11.2006ರವರೆಗೆ ಗೋವಾ ರಾಜ್ಯಕ್ಕೆ ಪ್ರವಾಸ ಕೈಗೊಳ್ಳಲು ಸರ್ಕಾರದ ಅನುಮತಿ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 22 ರಾಪಸ 2006, ಬೆಂಗಳೂರು, ದಿನಾಂಕ: 3ನೇ ನವೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಉದ್ದೇಶಗಳಿಗಾಗಿ ಶ್ರೀಮತಿ ಉಷಾಸುರೇಶ್, ನಿರ್ದೇಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ ಅವರಿಗೆ ದಿನಾಂಕ: 20.11.2006 ರಿಂದ 24.11.2006 ರವರೆಗೆ ಗೋವಾ ರಾಜ್ಯ ಪತ್ರಾಗಾರಕ್ಕೆ ಪ್ರವಾಸ ಕೈಗೊಳ್ಳಲು ಅನುಮತಿ ನೀಡಲಾಗಿದೆ. ಪ್ರವಾಸದಿಂದ ಹಿಂದಿರುಗಿದ ನಂತರ ದಾಖಲೆ ಇತ್ಯಾದಿಗಳನ್ನು ಪಡೆಯಲು ಕೈಗೊಂಡ ಕ್ರಮದ ಕುರಿತು ನಿರ್ದೇಶಕರು ಒಂದು ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 1590

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಜಿ.ಎನ್. ಬಸವರಾಜು, ಹಿಂದಿನ ವಿಶೇಷ ತಹಶೀಲ್ದಾರ್, ನಗರ ಭೂಮಿತಿ ಶಾಖೆ, ಮೈಸೂರು ಜಿಲ್ಲಾಧಿಕಾರಿಗಳ ಕಛೇರಿ, ಮೈಸೂರು ಹಾಲಿ ತಹಶೀಲ್ದಾರ್ ಕಾರವಾರ ತಾಲ್ಲೂಕು ಉ.ಕನ್ನಡ ಜಿಲ್ಲೆ ರವರ ವಿರುದ್ಧ ಅಕ್ರಮ ಸಂಭಾವನೆ ಸ್ವೀಕಾರ ಲೋಕಾಯುಕ್ತ ಪ್ರಕರಣ-ಅಮಾನತ್ತಿನ ಅವಧಿಯನ್ನು ಸಕ್ರಮಗೊಳಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ ಕಂ.ಇ. 105 ಎಡಿಇ 95, ದಿನಾಂಕ:10.1.1996.
2. ಸರ್ಕಾರದ ಆದೇಶ ಸಂಖ್ಯೆ ಕಂ.ಇ. 105 ಎಡಿಇ 95, ದಿನಾಂಕ:11.4.1996.
3. ಸರ್ಕಾರದ ಆದೇಶ ಸಂಖ್ಯೆ ಕಂ.ಇ. 105 ಎಡಿಇ 95, ದಿನಾಂಕ:13.8.1996.
4. ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ರವರ ಪತ್ರ ಸಂಖ್ಯೆ ಲೋಕ್ / ಎಲ್ ಸ ವಿ (ಜೆ)ಎಂ-75/ಸಿ.ಆರ್.
5. ಶ್ರೀ ಜಿ.ಎನ್. ಬಸವರಾಜು, ತಹಶೀಲ್ದಾರ್ ರವರ ದಿನಾಂಕ: 19.4.2006ರ ಮನವಿ.

**ಪ್ರಸ್ತಾವನೆ:**

ಶ್ರೀ ಜಿ.ಎನ್. ಬಸವರಾಜು, ತಹಶೀಲ್ದಾರ್, ಕಾರವಾರ ತಾಲ್ಲೂಕು, ಉ.ಕನ್ನಡ ಜಿಲ್ಲೆ ಇವರು ಈ ಹಿಂದೆ ವಿಶೇಷ ತಹಶೀಲ್ದಾರ್, ನಗರ ಭೂಮಿತಿ ಶಾಖೆ, ಮೈಸೂರು ಜಿಲ್ಲಾಧಿಕಾರಿಗಳವರ ಕಛೇರಿ ಈ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಮೈಸೂರು ನಿವಾಸಿಯಾದ ಶ್ರೀ ನಟರಾಜ್ ಅವರಿಂದ ದಿನಾಂಕ:19.10.1995 ರಂದು ರೂ. 500/- ಗಳ ಅಕ್ರಮ ಸಂಭಾವನೆ ನಡೆಯುತ್ತಿದ್ದಾಗ ಲೋಕಾಯುಕ್ತ ಪೊಲೀಸರಿಗೆ ಸಿಕ್ಕಿ ಬಿದ್ದಿದ್ದು ಸರ್ಕಾರದ ಗಮನಕ್ಕೆ ಬಂದಿದ್ದು, ಈ ದುರ್ನಡತೆಗಾಗಿ ಸದರಿಯವರನ್ನು ಅವರ ವಿರುದ್ಧದ ಕ್ರಿಮಿನಲ್ ಮೊಕದ್ದಮೆ/ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಮೇಲೆ ಬದಲಾದ ಕ್ರ.ಸಂ. (1)ರ ದಿನಾಂಕ: 10.1.1996ರ ಆದೇಶದಲ್ಲಿ ಅವರನ್ನು ಸೇವೆಯಿಂದ ಅಮಾನತ್ತಿನಲ್ಲಿರಿಸಲಾಗಿತ್ತು.

ಡೈರೆಕ್ಟರ್ ಜನರಲ್ ತನಿಖಾದಳ ಲೋಕಾಯುಕ್ತ ಕಛೇರಿ, ಬೆಂಗಳೂರು ರವರ ವರದಿ ಮತ್ತು ತನಿಖೆಯ ಸಂಬಂಧಪಟ್ಟ ಕಾಗದ ಪತ್ರಗಳನ್ನು ಪರಿಶೀಲಿಸಿ ಸರ್ಕಾರವು ಶ್ರೀ ಜಿ.ಎನ್. ಬಸವರಾಜು, ಹಿಂದಿನ ವಿಶೇಷ ತಹಶೀಲ್ದಾರ್, ನಗರ ಭೂಮಿತಿ ಶಾಖೆ ಮೈಸೂರು ಜಿಲ್ಲಾಧಿಕಾರಿಗಳ ಕಛೇರಿ ಇವರ ವಿರುದ್ಧ 1988ರ ಭ್ರಷ್ಟಾಚಾರ ನಿರೋಧ ಕಾಯ್ದೆಯ ಪ್ರಕರಣ 7 ಮತ್ತು 13(1) (ಡಿ)ರ ಜೊತೆಯಲ್ಲಿ ಓದಲಾದ ಪ್ರಕರಣ 13(2)ರ ಪ್ರಕಾರ ಶಿಕ್ಷಾರ್ಹವಾಗಿರುವ ಆಪಾದನೆಗಳ ವಿಷಯದಲ್ಲಿ ಸಕ್ಷಮ ಅಧಿಕಾರ ವ್ಯಾಪ್ತಿಯುಳ್ಳ ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡಲು ಮೇಲೆ ಕ್ರ.ಸಂ.(2)ರಲ್ಲಿ ಓದಲಾದ ದಿನಾಂಕ:11.4.1996ರಕ ಆದೇಶದಲ್ಲಿ ಸರ್ಕಾರದ ಮಂಜೂರಾತಿ ನೀಡಲಾಗಿತ್ತು.

ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ ಡಿ.ಪಿ.ಎ.ಆರ್ 13 ಎಸ್.ಡಿ.ಇ. 85 ದಿನಾಂಕ: 3.7.1985ರನ್ವಯ ಈ ಪ್ರಕರಣವನ್ನು ಪರಿಸೀಲಿಸಿ ಶ್ರೀ ಜಿ.ಎನ್. ಬಸವರಾಜು, ರವರ ಅಮಾನತ್ತಿನಲ್ಲಿರಿಸಿದ ಅವಧಿಯು 6 ತಿಂಗಳಿಗೂ ಮೀರಿದ್ದು ಸದರಿಯವರ ವಿರುದ್ದದ ಕ್ರಿಮಿನಲ್ ವಿಚಾರಣೆಯನ್ನು ಕಾಯ್ದಿರಿಸಿ ಮೇಲೆ ಓದಲಾದ ಕ್ರ.ಸಂ.(3)ರಲ್ಲಿನ ದಿನಾಂಕ: 13.8.96ರ ಆದೇಶದಲ್ಲಿ ಅವರನ್ನು ಅಮಾನತ್ತಿನಿಂದ ಬಿಡುಗಡೆಗೊಳಿಸಲಾಗಿತ್ತು.

ಮೈಸೂರು ಲೋಕಾಯುಕ್ತ ಪೊಲೀಸ್ ಠಾಣೆಯ ಗುನ್ನೆ ಸಂಖ್ಯೆ 19/1995 ಕಲಂ 13(1)(ಡಿ) ಸಹವಾಚಕ 13(2)ರ ಆರೋಪಿತರಾದ ಶ್ರೀ ಜಿ.ಎನ್. ಬಸವರಾಜು, ಅಂದಿನ ವಿಶೇಷ ತಹಶೀಲ್ದಾರ್ ಅರ್ಬನ್ ಲ್ಯಾಂಡ್ ಸೀಲಿಂಗ್ ಸೆಕ್ಷನ್ ಜಿಲ್ಲಾಧಿಕಾರಿಗಳ ಕಛೇರಿ ಮೈಸೂರು ಅವರ ವಿರುದ್ಧ ಲಂಚ ಸ್ವೀಕಾರ ಪ್ರಕರಣದಲ್ಲಿ ಮೈಸೂರು ಜಿಲ್ಲಾ ಸತ್ರ ನ್ಯಾಯಾಲಯವು ವಿಶೇಷ ಸಂಖ್ಯೆ 23/1997ರಲ್ಲಿ ದಿನಾಂಕ:30.11.1995 ರಂದು ಆರೋಪಿಯನ್ನು ಆರೋಪದಿಂದ ಮುಕ್ತಮಾಡಿ ತೀರ್ಪು ನೀಡಿದ್ದು ಈ ತೀರ್ಪಿನ ಮೇಲೆ ಸರ್ಕಾರದ ಕಾರ್ಯದರ್ಶಿಗಳು, ಒಳಾಡಳಿತ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ ಹೆಚ್‌ಡಿ 2572 ಹೆಚ್.ಸಿ.ಪಿ. 2/2006, ದಿನಾಂಕ: 20.3.06ರಲ್ಲಿ ಮೇಲ್ಮನವಿ ಸಲ್ಲಿಸದಿರಲು ನಿರ್ಧರಿಸಿರುತ್ತದೆಂದು ಮೇಲೆ ಓದಲಾದ ಕ್ರ.ಸಂ. (4)ರ ದಿನಾಂಕ: 25.3.2006ರ ಪತ್ರದಲ್ಲಿ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ರವರು ಸರ್ಕಾರಕ್ಕೆ ವರದಿ ಮಾಡಿರುತ್ತಾರೆ. ಮೇಲೆ ಓದಲಾದ ಕ್ರ.ಸಂ.(5)ರಲ್ಲಿ ಶ್ರೀ ಜಿ.ಎನ್. ಬಸವರಾಜು, ತಹಶೀಲ್ದಾರ್, ಸಿದ್ದಾಪುರ ತಾಲ್ಲೂಕು ರವರು ಸರ್ಕಾರಕ್ಕೆ ಮನವಿ ಸಲ್ಲಿಸಿ ಮೈಸೂರು ಲೋಕಾಯುಕ್ತರು ದಾಖಲು ಮಾಡಿದ ಮೊಕದ್ದಮೆಯನ್ನು ಮೈಸೂರಿನ ವಿಶೇಷ ನ್ಯಾಯಾಲಯದಲ್ಲಿ ಸುರ್ದೀರ್ಘ ವಿಚಾರಣೆ ನಡೆದು ಘನ ನ್ಯಾಯಾಲಯವು ದಿನಾಂಕ:30.11.2005ರಂದು ನೀಡಿದ ಆದೇಶದಲ್ಲಿ ಆರೋಪಗಳು ಸಾಬೀತಾಗಿಲ್ಲವೆಂದು ಆದೇಶ ನೀಡಿ ಪ್ರಕರಣರವನ್ನು ವಿಲೇವಾರಿಮಾಡಿದ್ದು, ಸರ್ಕಾರವು ಈ ಪ್ರಕರಣದ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ನಿರ್ಧರಿಸಿರುವ ಹಿನ್ನೆಲೆಯಲ್ಲಿ ದಿನಾಂಕ: 10.1.1996 ರಿಂದ 12.8.1996ರ ವರೆಗಿನ ತಮ್ಮ ಅಮಾನತ್ತಿನ ಅವಧಿಯನ್ನು ಸಕ್ರಮಿಕರಿಸುವುದರೊಂದಿಗೆ ಆ ಅವಧಿಯ ಉಳಿದ ಮೊಬಲಗನ್ನು ಬಿಡುಗಡೆ ಮಾಡಲು ಕೋರಿರುತ್ತಾರೆ.

ಸರ್ಕಾರವು ಈ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಶ್ರೀ ಜಿ.ಎನ್. ಬಸವರಾಜು, ಅಂದಿನ ವಿಶೇಷ, ತಹಸೀಲ್ದಾರ್, ನಗರ ಭೂಮಿತಿ ಶಾಖೆ, ಜಿಲ್ಲಾಧಿಕಾರಿಗಳವರ ಕಛೇರಿ ಮೈಸೂರು ರವರ ವಿರುದ್ಧ ಲಂಚ ಸ್ವೀಕಾರ ಪ್ರಕರಣದಲ್ಲಿ ಮೈಸೂರು ಜಿಲ್ಲಾ ಸತ್ರ ನ್ಯಾಯಾಲಯವು ವಿಶೇಷ ಪ್ರಕರಣ ಸಂಖ್ಯೆ 23/1997ರಲ್ಲಿ ದಿನಾಂಕ: 30.11.1995 ರಂದು ನೀಡಿರುವ ತೀರ್ಪಿನಲ್ಲಿ ಸದರಿಯವರನ್ನು ಆರೋಪದಿಂದ ಮುಕ್ತ ಮಾಡಿರುವುದನ್ನು ಹಾಗೂ ಸದರಿ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಒಳಾಡಳಿತ ಇಲಾಖೆಯು ನಿಧರಿಸಿರುವುದನ್ನು ಪರಿಗಣಿಸಿ ಶ್ರೀ ಜಿ.ಎನ್. ಬಸವರಾಜು, ರವರು ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಕರ್ತವ್ಯದ ಮೇಲೆ ಕಳೆದ ಅವಧಿಯೆಂದು ಪರಿಗಣಿಸಲು ತೀರ್ಮಾನಿಸಿದೆ. ಆದ ಕಾರಣ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂ.ಇ. 39 ಎಡಿಇ 2006, ಬೆಂಗಳೂರು, ದಿನಾಂಕ: 18ನೇ ಸೆಪ್ಟೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಜಿ.ಎನ್. ಬಸವರಾಜು, ಹಿಂದಿನ ವಿಶೇಷ ತಹಶೀಲ್ದಾರ್, ನಗರ ಭೂಮಿತಿ ಶಾಖೆ, ಮೈಸೂರು ಜಿಲ್ಲಾಧಿಕಾರಿಗಳ ಕಛೇರಿ ಹಾಲಿ ತಹಶೀಲ್ದಾರ್, ಕಾರವಾರ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ ರವರು ಅಮಾನತ್ತಿನಲ್ಲಿ ಕಳೆದ ಅವಧಿ ದಿನಾಂಕ: 10.1.1996 ರಿಂದ 12.8.1996ರ ವರೆಗಿನ ಅಮಾನತ್ತಿನ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮ 100(1)(ಬಿ)ರನ್ವಯ ಕರ್ತವ್ಯ ಮೇಲೆ ಕಳೆದ ಅವಧಿಯೆಂದು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶ್ರೀಮತಿ ಚಂದ್ರಶೇಖರ್**

ಪಿ.ಆರ್. 1527

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು-3)

**ವಿಷಯ:** ಶ್ರೀ ಕೆ.ಎಸ್. ರಾಮಾಂಜನಪ್ಪ, ಹಿಂದಿನ ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ಹಾಲಿ ತಹಶೀಲ್ದಾರ್, ಪ್ರಾದೇಶಿಕ ಆಯುಕ್ತರ ಕಛೇರಿ, ಬೆಂಗಳೂರು ಮತ್ತು ಶ್ರೀಮತಿ ಕೆ.ಎಸ್. ಪ್ರೇಮಲತಾ ಶೆಟ್ಟಿ, ದ್ವಿ.ದ.ಸಹಾಯಕಿ, ಬೆಂಗಳೂರು ಉತ್ತರ ತಾಲ್ಲೂಕು, ಇವರ ವಿರುದ್ಧ ಜಂಟಿ ಇಲಾಖಾ ವಿಚಾರಣೆ-ಆರೋಪ ಮುಕ್ತರನ್ನಾಗಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ ಕಂ.ಇ. 57 ಎ.ಡಿ.ಇ 2001, ದಿನಾಂಕ:22.12.2005.
2. ವಿಚಾರಣಾಧಿಕಾರಿಗಳ ವರದಿ ದಿನಾಂಕ:3.6.2006.

**ಪ್ರಸ್ತಾವನೆ:**

ಶ್ರೀಮತಿ ಕೆ.ಎಸ್. ಪ್ರೇಮಲತಾ ಶೆಟ್ಟಿ, ದ್ವಿ.ದ.ಸಹಾಯಕರು ಇವರನ್ನು ಬೆಂಗಳೂರು ನಗರ ಜಿಲ್ಲಾಧಿಕಾರಿಗಳ ಅಧಿಕೃತ ಜ್ಞಾಪನ ಸಂಖ್ಯೆ ಇಎಸ್‌ಟಿ (2) ಸಿಸಿಎ.ಸಿಆರ್ 17/98.99ರ ದಿನಾಂಕ: 2.6.99ರಂತೆ ಆನೇಕಲ್ ತಾಲ್ಲೂಕು ಕಛೇರಿಗೆ ವರ್ಗಾಯಿಸಲಾಗಿತ್ತೆಂದು, ಆದರೆ ಸದರಿ ಆದೇಶದಂತೆ ವರ್ಗಾವಣೆಯಾದ ಆನೇಕಲ್ ತಾಲ್ಲೂಕು ಕಛೇರಿಗೆ ಕರ್ತವ್ಯಕ್ಕೆ ಹಾಜರಾಗದೇ ಶ್ರೀಮತಿ ಕೆ.ಎಸ್. ಪ್ರೇಮಲತಾ ಶೆಟ್ಟಿ ರವರು ಜಿಲ್ಲಾಧಿಕಾರಿಗಳಿಗೆ ಮನವಿ ಸಲ್ಲಿಸಿದ್ದರ ಮೇರೆಗೆ ದಿನಾಂಕ:25.9.1999ರ ಅಧಿಕೃತ ಜ್ಞಾಪನದಂತೆ ಸದರಿ ನೌಕರರನ್ನು ನಿಯೋಜನೆ ಮೇರೆಗೆ ಬೆಂಗಳೂರು ಉತ್ತರ ತಾಲ್ಲೂಕಿಗೆ ನೇಮಿಸಲಾಗಿತ್ತೆಂದು, ಇದನ್ನು ಸರಿಯಾಗಿ ಪರಿಶೀಲಿಸದೇ ಅಂದಿನ ಬೆಂಗಳೂರು ಉತ್ತರ ತಾಲ್ಲೂಕಿನ ತಹಶೀಲ್ದಾರರಾಗಿದ್ದ ಹಾಗೂ ಹಾಲಿ ತಹಶೀಲ್ದಾರ್ ಪ್ರಾದೇಶಿಕ ಆಯುಕ್ತರ ಕಛೇರಿ (ಕಂದಾಯ) ಬೆಂಗಳೂರು ಆಗಿರುವ ಶ್ರೀ ಕೆ.ಎಸ್. ರಾಮಾಂಜನಪ್ಪ ರವರು ಸದರಿ ನೌಕರರಿಗೆ ಸಂಬಳ, ಭತ್ಯೆ, ಇತ್ಯಾದಿಗಳ ವಿತರಿಸಿ ಮೇಲಾಧಿಕಾರಿಗಳ ಆದೇಶವನ್ನು ಪಾಲಿಸದೇ ಕರ್ತವ್ಯಚ್ಯುತಿ ಎಸಗಿರುವ ಹಾಗೂ ದ್ವಿ.ದ.ಸಹಾಯಕರಾದ ಶ್ರೀಮತಿ ಕೆ.ಎಸ್. ಪ್ರೇಮಲತಾ ಶೆಟ್ಟಿ ಯವರು ಆನೇಕಲ್ ತಾಲ್ಲೂಕಿಗೆ ಅನ್ವಯವಾಗುವ ನಗರ ಭತ್ಯೆ ಮತ್ತು ಮನೆ ಬಾಡಿಗೆ ಭತ್ಯೆ ಪಡೆಯಲು ಅರ್ಹರಾಗಿದ್ದರೂ **ಬೆಂಗಳೂರು ನಗರಕ್ಕೆ ಅನ್ವಯವಾಗುವ ನಗರ ಭತ್ಯೆ, ಮತ್ತು ಮನೆ ಬಾಡಿಗೆ ಭತ್ಯೆ ಪಡೆದಿರುವ ಕರ್ತವ್ಯಚ್ಯುತಿ ಆರೋಪದ ಮೇಲೆ ಈ ಒಬ್ಬರು ಅಧಿಕಾರಿ/ನೌಕರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ಮೇಲೆ ಓದಲಾದ ಕ್ರ.ಸ(1)ರ ದಿನಾಂಕ:22.12.2005ರ ಆದೇಶದಲ್ಲಿ ವಿಚಾರಣಾಧಿಕಾರಿಗಳನ್ನು ನೇಮಕ ಮಾಡಿ ಆದೇಶಿಸಲಾಗಿತ್ತು.**

ಪ್ರಕರಣದ ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ ಕ್ರ.ಸ.(2)ರಂತೆ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದು, ಆರೋಪಿತರುಗಳ ಮೇಲೆ ಹೊರಿಸಲಾದ ಆರೋಪಗಳು ಸಾಬೀತಾಗಿರುವುದಿಲ್ಲವೆಂದು ಅಭಿಪ್ರಾಯಪಟ್ಟಿರುತ್ತಾರೆ. ವಿಚಾರಣಾಧಿಕಾರಿಗಳ ವರದಿ ವಿಚಾರಣಾ ಕಡತ/ದಾಖಲೆಗಳನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಶ್ರೀ ಕೆ.ಎಸ್. ರಾಮಾಂಜನಪ್ಪ, ತಹಶೀಲ್ದಾರ್ ಹಾಗೂ ಶ್ರೀಮತಿ ಕೆ.ಎಸ್. ಪ್ರೇಮಲತಾ ಶೆಟ್ಟಿ, ದ್ವಿ.ದ.ಸಹಾಯಕರು ಇವರುಗಳ ಮೇಲೆ ಹೊರಿಸಲಾದ ಆರೋಪಗಳು ಸಾಬೀತಾಗಿಲ್ಲದಿರುವ ವಿಚಾರಣಾಧಿಕಾರಿಗಳ ವರದಿಯನ್ನು ಒಪ್ಪಿ ಸದರಿಯವರುಗಳನ್ನು ಆರೋಪ ಮುಕ್ತರನ್ನಾಗಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂ.ಇ. 57 ಎಡಿಇ 2001, ಬೆಂಗಳೂರು, ದಿನಾಂಕ: 18ನೇ ಸೆಪ್ಟೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಕೆ.ಎಸ್. ರಾಮಾಂಜನಪ್ಪ, ಹಿಂದಿನ ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ಹಾಲಿ ತಹಶೀಲ್ದಾರ್ ಪ್ರಾದೇಶಿಕ ಆಯುಕ್ತರ ಕಛೇರಿ (ಕಂದಾಯ) ಬೆಂಗಳೂರು ಮತ್ತು ಶ್ರೀಮತಿ ಕೆ.ಎಸ್. ಪ್ರೇಮಲತಾಶೆಟ್ಟಿ, ದ್ವಿ.ದ.ಸಹಾಯಕಿ ಬೆಂಗಳೂರು ಉತ್ತರ ತಾಲ್ಲೂಕು ಇವರುಗಳ ವಿರುದ್ಧ ಸರ್ಕಾರದ ಆದೇಶ ಸಂಖ್ಯೆ ಕಂ.ಇ. 57 ಎಡಿಇ 2001, ದಿನಾಂಕ: 22.2.2005ರ ಆದೇಶದಲ್ಲಿ ಹೊರಡಿಸಲಾದ ಆರೋಪಗಳಿಂದ ಮುಕ್ತಗೊಳಿಸಿ ಆದೇಶಿಸಿದೆ.

ಈ ಪ್ರಕರಣದ ಮಟ್ಟಿಗೆ ಸಂಬಂಧಿಸಿದಂತೆ ಮೇಲ್ಕಂಡ ಅಧಿಕಾರಿ/ನೌಕರರುಗಳ ವಿರುದ್ಧ ಈ ಇಲಾಖಾ ವಿಚಾರಣೆಯು ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಾಗಿರುತ್ತಿದ್ದರೋ ಅಂತಹ ಸೇವಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶ್ರೀಮತಿ ಚಂದ್ರಶೇಖರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು-3)

ಪಿ.ಆರ್. 1528

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಸುತ್ತೋಲೆ

**ಸಂಖ್ಯೆ: ಸಿಆಸುಇ 25 ಸೇಸ್ಥಅ 2003 (ಭಾ), ಬೆಂಗಳೂರು, ದಿನಾಂಕ: 13ನೇ ನವೆಂಬರ್ 2006**

**ವಿಷಯ:** ದಿನಾಂಕ: 1.7.84ರ ನಂತರ ಸೇವೆಯಲ್ಲಿ ತೊಡಗಿಸಲಾದ ದಿನಗೂಲಿ ನೌಕರರ ಬಗ್ಗೆ.

**ಉಲ್ಲೇಖ:** ಸುತ್ತೋಲೆ ಸಂಖ್ಯೆ: ಸಿಆಸುಇ 25 ಸೇಸ್ಥಅ 2003 ದಿನಾಂಕ: 25.5.2006 ಮತ್ತು 6.7.2006.

ದಿನಾಂಕ: 1.7.84ರ ನಂತರ ತೊಡಗಿಸಲಾದ ದಿನಗೂಲಿ ನೌಕರರನ್ನು ಸಕ್ರಮಗೊಳಿಸುವ ಕುರಿತ ಸಿವಿಲ್ ಅಪೀಲು ಸಂಖ್ಯೆ: 3595-3612/99 ಮತ್ತು ಸಿವಿಲ್ ಅಪೀಲು ಸಂಖ್ಯೆ: 1861-2063/2001 ಮತ್ತಿತರ ಮತ್ತು ಸಿವಿಲ್ ಅಪೀಲುಗಳಲ್ಲಿ ಮಾನ್ಯ ಸರ್ವೋಚ್ಚ ನ್ಯಾಯಾಲಯದ ಸಂವಿಧಾನ ಪೀಠವು ದಿನಾಂಕ: 10.4.2006 ರಂದು ನೀಡಿದ ತೀರ್ಪಿನ ಹಿನ್ನೆಲೆಯಲ್ಲಿ ದಿನಾಂಕ: 25.5.2006ರ ಉಲ್ಲೇಖಿತ ಸುತ್ತೋಲೆಯನ್ನು ಹೊರಡಿಸಲಾಗಿದೆ. ಸದರಿ ಸುತ್ತೋಲೆಯ ಪ್ಯಾರಾ 2ರಲ್ಲಿ ಕೆಲವು ಷರತ್ತುಗಳನ್ನು ಪೂರೈಸಿದ ದಿನಗೂಲಿ ನೌಕರರ ಸೇವೆಯನ್ನು ಸಕ್ರಮಗೊಳಿಸಬಹುದೆಂದು ಹೇಳಲಾಗಿದೆ. ಈ ಸುತ್ತೋಲೆಯನ್ನು ಸರಿಯಾಗಿ ಅರ್ಥೈಸದೆ ಕೆಲವು ಇಲಾಖೆಗಳು ದಿನಗೂಲಿ ನೌಕರನ್ನು ಸಕ್ರಮಗೊಳಿಸುತ್ತಿರುವ ವಿಚಾರ ಸರ್ಕಾರದ ಗಮನಕ್ಕೆ ಬಂದಿದೆ.

2. ದಿನಾಂಕ: 10.4.2006ರ ಸುಪ್ರೀಂ ಕೋರ್ಟ್‌ನ ತೀರ್ಪಿನ ಹಿನ್ನೆಲೆಯಲ್ಲಿ ಈ ಕೆಳಕಂಡ ನಾಲ್ಕು ಷರತ್ತುಗಳನ್ನು ಪೂರೈಸಿದ ದಿನಗೂಲಿ ನೌಕರರನ್ನು ಸಕ್ರಮಗೊಳಿಸಲು ಪರಿಗಣಿಸಬಹುದು

(1) ಅಂತಹ ನೌಕರರನ್ನು ಮೂಲತಃ ಮಂಜೂರಾದ ಖಾಲಿ ಹುದ್ದೆಯಲ್ಲಿ ನೇಮಕ ಮಾಡಿರಬೇಕು.

(2) ಹೀಗೆ ಅವರನ್ನು ನೇಮಕ ಮಾಡುವಾಗ ಅವರು ಸಂಬಂಧಿತ ಹುದ್ದೆಗೆ ನಿಗದಿಪಡಿಸಿರುವ ವಿದ್ಯಾರ್ಹತೆಯನ್ನು ಹೊಂದಿರಬೇಕು.

(3) ಹೀಗೆ ನೇಮಕಗೊಂಡಂತಹ ನೌಕರರು 10 ವರ್ಷಗಳಿಗೂ ಹೆಚ್ಚಿನ ಅವಧಿಗೆ ಸತತವಾಗಿ ಅದೇ ಹುದ್ದೆಯಲ್ಲಿ ಕಾರ್ಯ ನಿರ್ವಹಿಸಿರಬೇಕು.

(4) ನ್ಯಾಯಾಲಯಗಳ ಅಥವಾ ನ್ಯಾಯಮಂಡಳಿಗಳ ಆದೇಶಕ್ಕೊಳಪಟ್ಟು 10 ವರ್ಷಗಳಿಗೂ ಹೆಚ್ಚಿನ ಅವಧಿಗೆ ಅವರನ್ನು ಮುಂದುವರಿಸಿರಬಾರದು.

3. ಮೇಲ್ಕಂಡ ಷರತ್ತುಗಳಲ್ಲಿ ನಾಲ್ಕನೆಯ ಷರತ್ತೆಂದರೆ ನೌಕರರು 10 ವರ್ಷಗಳು ಅಥವಾ ಅದಕ್ಕೂ ಹೆಚ್ಚಿನ ಅವಧಿಗೆ ಮುಂದುವರಿದಿರುವುದು ನ್ಯಾಯಾಲಯಗಳು ಅಥವಾ ನ್ಯಾಯಾಧೀಕರಣಗಳ ಆದೇಶದಿಂದ ಆಗಿರಬಾರದು ಎಂಬುದು ("...... employees have continued to work for ten years or more but without the intervention of orders of courts of tribunals.") ಈ ಅಂಶಕ್ಕೆ ಸಂಬಂಧಿಸಿದಂತೆ ದಿನಾಂಕ:25.5.2006ರ ಉಲ್ಲೇಖಿತ ಸುತ್ತೋಲೆಯ ಪ್ಯಾರಾ 4ರಲ್ಲಿ ನೀಡಲಾದ ವಿವರಗಳೆಡೆಗೆ ಎಲ್ಲಾ ಇಲಾಖೆಗಳ ಗಮನವನ್ನು ಸೆಳೆಯಲಾಗಿದೆ. ಪ್ಯಾರಾ 4 ರಿಂದ ಸ್ಪಷ್ಟವಾಗುವುದೇನೆಂದರೆ, ಈ ದಿನಗೂಲಿ ನೌಕರರುಗಳನ್ನು ಮುಂದುವರಿಸಿರಲು ದಿನಾಂಕ: 11.4.90ಮತ್ತು 23.4.93 ರಿಂದ ಉಚ್ಚ ನ್ಯಾಯಾಲಯವು ನೀಡಿದ ಆದೇಶಗಳು ಕಾರಣವಾಗಿವೆ. ಈ ಆದೇಶಗಳಿಂದಾಗಿ ದಿನಾಂಕ: 1.7.84ರ ನಂತರ ನೇಮಕಗೊಂಡ ದಿನಗೂಲಿ ನೌಕರರನ್ನು ಸೇವೆಯಲ್ಲಿ ಮುಂದುವರಿಸಲಾಗಿದೆ. ಆದುದರಿಂದ, ರಾಜ್ಯದಲ್ಲಿರುವ ಬಹುಪಾಲು ದಿನಗೂಲಿ ನೌಕರರ ನ್ಯಾಯಾಲಯದ ಈ ಆದೇಶಗಳಿಂದ ಮುಂದುವರಿದಿರುವುದರಿಂದ ಅವರು ಸುಪ್ರೀಂ ಕೋರ್ಟ್ ನಿಗದಿಪಡಿಸಿದ ನಾಲ್ಕನೆಯ ಷರತ್ತನ್ನು ಪೂರೈಸಿದಂತಾಗುವುದಿಲ್ಲ. ಹೀಗಾಗಿ ಅವರು ಸಕ್ರಮಾತಿಗೆ ಅರ್ಹರಾಗುವುದಿಲ್ಲ.

4. ಮೇಲ್ಕಂಡ ಅಂಶದ ಹಿನ್ನೆಲೆಯಲ್ಲಿ ದಿನಾಂಕ: 10.4.2006ರ ನಂತರ ಯಾವುದಾದರೂ ಇಲಾಖೆಯು ದಿನಗೂಲಿ ನೌಕರರನ್ನು ಸಕ್ರಮಗೊಳಿಸಿದ್ದಲ್ಲಿ ಅಂತಹ ಪ್ರಕರಣಗಳನ್ನು ಮೇಲ್ಕಂಡ ಸ್ಪಷ್ಟೀಕರಣದ ಹಿನ್ನೆಲೆಯಲ್ಲಿ ಪುನರ್ ಪರಿಶೀಲಿಸಿ ಅಂತಹ ಸಕ್ರಮಾತಿ ಆದೇಶಗಳು ಸುಪ್ರೀಂ ಕೋರ್ಟ್ ತೀರ್ಪಿನ ಅನುಗುಣವಾಗಿಲ್ಲದಿದ್ದಲ್ಲಿ ಅವುಗಳನ್ನು ಹಿಂಪಡೆಯಲು ಕ್ರಮ ಕೈಗೊಳ್ಳಬೇಕೆಂದು ತಿಳಿಸಲಾಗಿದೆ.

**ಸೈಯದ್ ಜಮೀರ್ ಪಾಷಾ**
ಸರ್ಕಾರದ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.

ಪಿ.ಆರ್. 1610

**FOREST, ECOLOGY AND ENVIRONMENT SECRETARIAT**

**Sub :** Diversion of 20.939 ha.of forest land for the construction of 110 KV S/C line & 110 KV D/C line to 110/11 KV sub station at Moodabidri in favour of M/s Bobba Power Projects, Bangalore.

**Read :**
1. Letter No. A5(3)GFL.CR.5/05-06, Dated:24.04.06 of the Principal Chief Conservator of Forests, Bangalore.
2. State Government letter No. FEE 79 FLL 2006, dated: 17.05.2006.
3. Letter No.4-KRC 218/2006-BAN/1001,dated:17.08.2006 of Government of India, Ministry of Environment and Forests,Regional Office(Southern Zone), Bangalore.
4. State Government letter No. FEE 79 FLL 2006, dated: 14.09.2006.
5. Letter No.4-KRC 218/2006-BAN/1272,dated:28.09.2006 of Government of India, Ministry of Environment and Forests,Regional Office, (Southern Zone), Bangalore.

**PREAMBLE:**

The Principal Chief Conservator of Forests, Bangalore vide his letter dated 24.04.2006 read at (1) above had submitted the proposal under Section 2 of Forest (Conservation) Act,1980 for diversion of 20.939 ha. of forest land for the construction of 110 KV S/C line from Hanneradu Kavalu in Arambodi Village to Killupadde in Irruvial Village and 110 KV D/C line from Killupadde in Irruvial Village to existing 110/11 KV substation of KPTCL at Moodabidri in favour of M/s Bobba Power Projects, Bangalore subject to certain conditions.

Accordingly the proposal was recommended to Government of India, Ministry of Environment and Forests, Regional Office(Southern Zone), Bangalore vide State Government letter dated: 17.05.2006 read at (2) above.

The Government of India, Ministry of Environment and Forests, Bangalore vide their letter dated 17.08.2006 read at (3) above has given its approval in Principle (Stage-I) for diversion of 20.939 ha. of forest land subject to fulfillment of certain conditions and the same was communicated to the Principal Chief Conservator of Forests, Bangalore for compliance.

The Principal Chief Conservator of Forests, Bangalore vide his letter dated 31.08.2006 furnished the compliance report and the same has been sent to Government of India vide State Government letter dated: 14.09.2006 read at (4) above.

Finally, Government of India Ministry of Environment and Forests, Regional Office(Southern Zone), Bangalore vide their letter dated 28/09/2006 read at (5) above had conveyed their approval (Stage-II) under Section 2 of Forest (Conservation) Act,1980 for diversion of 20.939 ha. of forest land/deemed forest land (20.057 ha. of deemed forest land and 0.123 ha. Reserved Forest land in Kundapur division and 0.759 ha. of Reserved Forest land in Mangalore division) for the construction of 110 KV S/C line from Hanneradu Kavalu in Arambadi Village to Killupadde in Irruvial Village and 110 KV D/C line from Killupadde in Irruvial Village to existing 110/11 KV sub station of KPTCL at Moodabidri in favour of M/s Bobba Power Projects, Bangalore subject to certain conditions.

The proposal has been examined in detail and hence the order.

**Government Order No. FEE 79 FLL 2006, Bangalore, Dated: 07th October 2006.**

In the Circumstances explained in the preamble above, Government are pleased to accord approval under Section 2 of Forest (Conservation) Act, 1980 for diversion of 20.939 ha. of forest land(20.057 ha. of deemed forest land and 0.123 ha. Reserved Forest land in Kundapur division and 0.759 ha. of Reserved Forest land in Mangalore division) for the construction of 110 KV S/C line from Hanneradu Kavalu in Arambodi Village to Killupadde in Irruvial Village and 110 KV D/C line from Killupadde in Irruvial Village to existing 110/11 KV Sub Station of KPTCL at Moodabidri in favour of M/s Bobba Power Project, Bangalore subject to the following conditions:

1. The legal status of the forest land shall remain unchanged.
2. Compensatory Afforestation shall be raised over 41.878 ha. of degraded forest land at the cost of user agency.
3. The funds received from the user agency towards NPV, Compensatory Afforestation under the project shall be transferred to Ad-hoc CAMPA in account number CA 1582 of Corporation Bank, Block-II, CGO Complex, Phase-I, Lodhi Road, New Delhi-110 003.
4. The total forest area utilized for the project shall not exceed 20.939 ha.
5. The forest land shall not be used for any purpose other than that specified in the proposal.

6. Only minimum number of trees shall be cut based on actual requirement for laying the K.V. line.
7. The lease period is for a period of 30 years.
8. The user agency has to pay the lease rent as fixed by the Government at the time of sanction and any subsequent orders in this regard.
9. In case the land is not used for the stipulated purpose or when it is no longer needed for the stipulated purpose the area should automatically revert back to the Forest Department.
10. The Karnataka Forest Act 1963 and Rules 1969 will be applicable for any violation.
11. If the land is not utilized for the purpose within 2 years and also if any violation is found of the stipulated conditions, the forest land shall be forfeited to Department after the approval from Government by the Conservator of Forests under section 82 (read with section 69 of Karnataka Forest Rules) of Karnataka Forest Act 1963.
12. The user agency shall pay the extraction and transportation charges of trees as estimated by the Deputy Conservator of Forests from the proposed land.
13. The user agency shall pay the cost of raising compensatory afforestation over an extent of 42.00 ha. of degraded forest land at the rate prevailing at the time of sanction (at present it is Rs. 54,200.00 per ha.).
14. The user agency shall pay the Net Present Value as per the Government Notification dated: 17.1.2004.
15. Additional amount of the Net Present Value(NPV) of the diverted forest land if any, becoming due after finalisation of the same by the Hon`ble Supreme Court of India on receipt of the report from the Expert Committee, shall be charged by the State Government from the user agency. The user agency shall furnish the undertaking to this effect.
16. The user agency shall abide by all the conditions imposed upon by Government of India, Government of Karnataka and the Principal Chief Conservator of Forests.
17. Any other condition to be stipulated by /Government of India/State Government /Principal Chief Conservator of Forests, Karnataka in the interest of conservation of forests.

By order and in the name of Governor of Karnataka

P.R. 1505

**P.R.KALAVATHI**

Under Secretary to Government,

Forest, Ecology and Environment Department.

**ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ**

**ವಿಷಯ:–** ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಪರಿವೀಕ್ಷಣಾಧಿಕಾರಿ ದರ್ಜೆ–1 ವೃಂದದ ಅಧಿಕಾರಿಗಳ ವೇತನವನ್ನು ಅರ್ಹತಾ ದಿನಾಂಕದನ್ವಯ ನಿಗದಿಪಡಿಸುವ ಕುರಿತು.

**ಓದಲಾಗಿದೆ:–** 1. ಅಧಿಸೂಚನೆ ಸಂ:ಮಮಇ 5 ಎಸ್‌ಜೆಡಿ 2002. ದಿ: 21–1–2002.

2. ಮಹಾಲೇಖಪಾಲರು, ಕರ್ನಾಟಕ ಬೆಂಗಳೂರು ಇವರ ಪತ್ರ ಸಂ:ಸಂ:ಜಿಇ/XI/ಡಿ/06–07/30 ದಿ: 6–4–2006

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ[1]ರಲ್ಲಿ ಓದಲಾದ ಅಧಿಸೂಚನೆಯಲ್ಲಿ, ಸರ್ಕಾರದ ಅಧಿಸೂಚನೆ ಸಂ:ಮಮಇ 190 ಎಸ್‌ಜೆಡಿ 1995 ದಿ: 11–4–1997ರಲ್ಲಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಪರಿವೀಕ್ಷಣಾಧಿಕಾರಿ ದರ್ಜೆ–1 ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಿ ಆಕ್ಷೇಪಣೆ ಸಲಹೆಗಳನ್ನು ಆಹ್ವಾನಿಸಿ, ಸದರಿ ತಾತ್ಕಾಲಿಕ ಜೇಷ್ಠತಾ ಪಟ್ಟಿಗೆ ಸಲ್ಲಿಸಿದ್ದ ಆಕ್ಷೇಪಣೆಗಳನ್ನು ಪರಿಶೀಲಿಸಿ, ಕರ್ನಾಟಕ ರಾಜ್ಯ ನಾಗರಿಕ ಸೇವಾ [ಪದೋನ್ನತಿ, ವೇತನ ಮತ್ತು ಪಿಂಚಣಿ ನಿಯಂತ್ರಣ] ಅಧಿನಿಯಮ, 1973 ರ ಪ್ರಕರಣ 4 ರನ್ವಯ ದಿ: 1–1–1990 ರಲ್ಲಿರುವಂತೆ ಅರ್ಹತಾ ದಿನಾಂಕಗಳನ್ನು ನಿಗದಿಪಡಿಸಿ, ಅಂತಿಮ ಜೇಷ್ಠತಾ ಪಟ್ಟಿಯನ್ನು ಹೊರಡಿಸಲಾಗಿರುತ್ತದೆ.

ಹಿರಿಯ ಲೆಕ್ಕಾಧಿಕಾರಿ, ಮಹಾಲೇಖಪಾಲರ ಕಚೇರಿ, ಬೆಂಗಳೂರು ಇವರು ಪತ್ರ ಸಂ:ಜಿಇ/XI/ಡಿ/06–07/30 ದಿ: 6–4–2006 ರ ಪತ್ರದಲ್ಲಿ, ಅರ್ಹತಾ ದಿನಾಂಕದನ್ವಯ ವೇತನವನ್ನು ನಿಗದಿಪಡಿಸಲು 1973 ರ ಪ್ರಕರಣ 4ರನ್ವಯ ಪದೋನ್ನತಿಗಳನ್ನು ಪುನರವಲೋಕಿಸಿ, ಎಲ್ಲ ವೃಂದದ ಜೇಷ್ಠತಾ ಪಟ್ಟಿಯನ್ನು ಹೊರಡಿಸಿದ್ದಲ್ಲಿ ವೇತನ ನಿಗದಿಪಡಿಸಲು ಮುಂದಿನ ಕ್ರಮ ಕೈಗೊಳ್ಳಲಾಗುವುದೆಂದು ಸೂಚಿಸಿರುತ್ತಾರೆ.

ಸದರಿ ಅಧಿನಿಯಮದ ಪ್ರಕರಣ 4 ರನ್ವಯ ಮೇಲೆ ಓದಲಾದ ಅಧಿಸೂಚನೆಯಲ್ಲಿ ಸೂಚಿಸಿರುವಂತೆ, ಪರಿವೀಕ್ಷಣಾಧಿಕಾರಿ ದರ್ಜೆ–1 ಅಧಿಕಾರಿಗಳ ಹೆಸರಿನ ಎದುರಿನಲ್ಲಿ, ನಿಗದಿಪಡಿಸಿರುವ ಅರ್ಹತಾ ದಿನಾಂಕದನ್ವಯ ವೇತನವನ್ನು ನಿಗದಿಪಡಿಸಿ, ವಾಸ್ತವ ಪದೋನ್ನತಿ ದಿನಾಂಕದಿಂದ ಆರ್ಥಿಕ ಸೌಲಭ್ಯವನ್ನು ನೀಡಬೇಕಾಗುತ್ತದೆ. ಆದ್ದರಿಂದ ಈ ಕೆಳಗೆ ಸೂಚಿಸಿದಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂ:ಮಮಇ 650 ಎಸ್‌ಜೆಡಿ 2004, ಬೆಂಗಳೂರು, ದಿನಾಂಕ:11ನೇ ಸೆಪ್ಟೆಂಬರ್ 2006**

ಕರ್ನಾಟಕ ರಾಜ್ಯ ನಾಗರಿಕ ಸೇವಾ [ಪದೋನ್ನತಿ, ವೇತನ ಮತ್ತು ಪಿಂಚಣಿ ನಿಯಂತ್ರಣ] ಅಧಿನಿಯಮ, 1973 ರ ಪ್ರಕರಣ 4 ರನ್ವಯ, ಅಧಿಸೂಚನೆ ಸಂ:ಮಮಇ 5 ಎಸ್‌ಜೆಡಿ 2002. ದಿ:21-1-2002ರಲ್ಲಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಪರಿವೀಕ್ಷಣಾಧಿಕಾರಿ ದರ್ಜೆ-1 ವೃಂದದ ಅಧಿಕಾರಿಗಳ ಅಂತಿಮ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಿ ಅವರ ಹೆಸರಿನ ಎದುರಿಗೆ ವಾಸ್ತವ ಪದೋನ್ನತಿ ದಿನಾಂಕವನ್ನು ಸೂಚಿಸಿ ಅರ್ಹತಾ ದಿನಾಂಕವನ್ನು ನಿಗದಿಪಡಿಸಲಾಗಿದೆ. ಸದರಿ ಜೇಷ್ಠತಾ ಪಟ್ಟಿಯಲ್ಲಿ ಸೂಚಿಸಿರುವಂತೆ ಈ ಕೆಳಗೆ ಸೂಚಿಸಿದ ಅಧಿಕಾರಿಗಳ ಎದುರಿಗೆ ಸೂಚಿಸಿರುವ ಅರ್ಹತಾ ದಿನಾಂಕವು ವಾಸ್ತವ ಪದೋನ್ನತಿ ದಿನಾಂಕಕ್ಕಿಂತ ಪೂರ್ವಾನ್ವಯವಾಗಿದ್ದಲ್ಲಿ, ಅರ್ಹತಾ ದಿನಾಂಕದಿಂದ ಪದೋನ್ನತಿ ಹೊಂದಿರುವರೆಂದು ಪರಿಗಣಿಸಿ, ಕಾಲ್ಪನಿಕವಾಗಿ ವೇತನ ನಿಗದಿಪಡಿಸಿ ವಾಸ್ತವ ಪದೋನ್ನತಿ ದಿನಾಂಕದಿಂದ ಆರ್ಥಿಕ ಸೌಲಭ್ಯ ಪಡೆಯಲು ಹಾಗೂ ಅರ್ಹತಾ ದಿನಾಂಕವು ವಾಸ್ತವ ಪದೋನ್ನತಿ ದಿನಾಂಕದ ನಂತರ ಉತ್ತರಾನ್ವಯವಾಗಿದ್ದಲ್ಲಿ ಅರ್ಹತಾ ದಿನಾಂಕದಿಂದ ಪದೋನ್ನತಿ ಹೊಂದಿರುವರೆಂದು ಪರಿಗಣಿಸಿ ಸದರಿ ದಿನಾಂಕದಿಂದ ವೇತನ ನಿಗದಿಪಡಿಸಿ ಆರ್ಥಿಕ ಸೌಲಭ್ಯ ಪಡೆಯಲು ಮಂಜೂರಾತಿ ನೀಡಲಾಗಿದೆ:

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು | ವಾಸ್ತವ ಪದೋನ್ನತಿ ದಿನಾಂಕ | ಅರ್ಹತಾ ದಿನಾಂಕ |
|---|---|---|---|
| 1. | ಮುತ್ತುಕೃಷ್ಣ ನಾಯ್ಡು | 01-04-59 | 26-02-59 |
| 2. | ಮಲ್ಲಯ್ಯನಮಠ, ಜಿ.ಎನ್. | 18-04-61 | 01-04-59 |
| 3 | ಪುರಾಣಿಕ್ ಬಿ.ಎನ್. | 15-06-62 | 29-01-60 |
| 4. | ಡೇವಿಡ್. ಆರ್.ವಿ. | 26-02-59 | 18-04-61 |
| 5. | ಭೋನ್ಸ್ಲೆ.ವಿ.ಡಿ. | 02-09-64 | 30-05-62 |
| 6 | ನಾಡಗೌಡ. ಪಿ.ಜಿ. | 29-01-60 | 15-06-62 |
| 7. | ಮುದ್ದೇಬಿಹಾಳ್.ಪಿ.ವಿ. | 01-06-65 | 11-04-63 |
| 8. | ಬಾಬಲೇಶ್ವರ್.ಹೆಚ್.ಎಂ. | 08-08-66 | 02-09-64 |
| 9. | ಮಧು.ಎಸ್.ಜೆ. | 30-05-62 | 05-05-65 |
| 10. | ತಿಮ್ಮಪ್ಪಶೆಟ್ಟಿ ಎನ್. | 20-05-67 | 01-06-65 |
| 11. | ಕಲವೀರಕ್ಕಣ್ಣವರ್.ಎಸ್.ಬಿ. | 16-07-69 | 03-11-66 |
| 12. | ಮುಲ್ಲಾ.ಎಲ್.ಕೆ. | 15-12-72 | 12-05-69 |
| 13. | ಪಾರ್ವತೀಕರ್.ಕೆ.ವಿ. | 18-05-70 | 21-07-69 |
| 14. | ಬಲಬಟ್ಟಿ.ಎಂ.ಆರ್. | -- | 18-05-70 |
| 15. | ಠಾಕೂರ್.ಜಿ.ಎಲ್. | 11-04-63 | 16-12-74 |
| 16. | ಗುಂಬ್ಳೋಳ್.ಬಿ.ಎಂ. | 05-05-65 | 21-06-75 |
| 17. | ಸಾಲಿಮಠ.ಎಂ.ಜಿ. | 29-01-77 | 14-11-75 |
| 18. | ಟಿ.ವಿ.ರಾಜಶೇಖರ್ | 25-05-73 | 11-12-75 |
| 19. | ಸಲೀಮುನ್ನೀಸಾ.ಜಡ್.ಎ. | 16-12-74 | 01-03-76 |
| 20. | ಪೊನ್ನಮ್ಮ.ಕೆ.ಎ. | 20-06-75 | 01-03-76 |
| 21. | ಕೃಷ್ಣಪ್ಪ.ಜಿ.ವಿ. | 15-01-75 | 10-08-76 |
| 22. | ತಮ್ಮಣ್ಣವರ್.ಎಸ್.ಎಂ. | 01-03-76 | 14-10-76 |
| 23. | ಕದಕೋಳ್.ವಿ.ಜಿ. | 01-01-77 | 23-12-76 |
| 24. | ಲಿಂಗಯ್ಯ.ಕೆ.ಎಂ. | 12-03-76 | 01-01-77 |
| 25. | ಬೋರಯ್ಯ.ಕೆ.ಟಿ. | 07-08-82 | 01-01-77 |
| 26. | ವೆಂಕಟೇಶಪ್ಪ | 29-01-77 | 01-01-77 |
| 27. | ನಾಯಕ್ ಎಂ.ಟಿ. | 01-01-77 | 01-01-77 |
| 28. | ದೇವರತ್ನ.ಎಂ.ವಿ. | 01-03-76 | 01-01-77 |
| 29. | ಭೋಜಮ್ಮ.ಎಂ.ಡಿ. | 01-03-76 | 01-01-77 |
| 30. | ವಡವಿ.ಡಿ.ಟಿ. | 14-11-75 | 29-01-77 |
| 31. | ಪಿಳ್ಳೈ.ಪಿ.ಎಸ್. | 30-03-78 | 29-01-77 |
| 32. | ನಾಡಗೌಡ.ಎನ್.ಆರ್. | 29-01-77 | 29-01-77 |
| 33. | ಕರಡಿ.ಆರ್.ಬಿ. | 29-01-77 | 31-08-77 |
| 34. | ಶಂಕರನಾರಾಯಣರಾವ್.ಎಸ್.ವಿ. | 25-08-77 | 31-08-77 |
| 35. | ಪಂಡಿತ್ ಜಿ.ಎಸ್. | 29-01-77 | 31-08-77 |
| 36 | ವಿಜಯ ಎಂ. | 01-03-76 | 31-08-77 |

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು | ವಾಸ್ತವ ಪದೋನ್ನತಿ ದಿನಾಂಕ | ಅರ್ಹತಾ ದಿನಾಂಕ |
|---|---|---|---|
| 37. | ಶಿಥೋಳೆ.ಡಿ.ಎಫ್. | 30–03–78 | 07–02–78 |
| 38. | ಪುಟ್ಟನಂಜಯ್ಯ.ಹೆಚ್.ಸಿ. | 30–03–78 | 30–11–78 |
| 39. | ಮಹದೇವಯ್ಯ.ಎಂ.ಎ. | 30–04–79 | 28–04–79 |
| 40. | ಮಣ್ಣೂರ್.ಎಸ್.ಆರ್. | 01–01–77 | 30–04–79 |
| 41. | ತಮ್ಮಯ್ಯ.ಟಿ. | 07–08–82 | 19–07–79 |
| 42. | ಗಣಜಲಖೇಡ್.ಎನ್.ಎಸ್. | 08–03–79 | 19–07–79 |
| 43. | ದೇಶಪಾಂಡೆ.ವಿ.ಎಸ್. | 29–01–77 | 19–07–79 |
| 44. | ಜವಳಗಿ.ಎಸ್.ಬಿ. | 18–07–85 | 19–07–79 |
| 45. | ಬೆಳಾರಿ.ಡಿ.ಎನ್. | 07–08–82 | 19–07–79 |
| 46. | ನಂಜುಂಡರಾಜಅರಸ್.ಎ.ಎನ್. | 08–03–79 | 19–07–79 |
| 47. | ವನಜಾಕ್ಷಿ.ಹೆಚ್.ಎಸ್. | 30–04–86 | 19–07–79 |
| 48. | ಚವ್ಹಾಣ್.ಸಿ.ಎಲ್. | 17–08–79 | 19–07–79 |
| 49. | ರಾಥೋಡ್.ಎಂ.ಆರ್. | 30–04–79 | 19–07–79 |
| 50. | ಮುಲ್ಲ.ಓ.ಯು | 31–01–77 | 19–07–79 |
| 51. | ಮಾದಯ್ಯ.ಎ. | 30–04–79 | 19–07–79 |
| 52. | ಕುಲಕರ್ಣಿ.ಎಂ.ಐ. | 17–01–81 | 02–02–80 |
| 53. | ಎಂ.ಬಿ.ಎ.ಖಾನ್. | 17–01–81 | 09–09–80 |
| 54. | ಸಾವಿತ್ರಿಬಾಯಿ.ಸಿ.ಹೆಚ್. | 01–09–76 | 09–09–80 |
| 55. | ಕಂಠಿ.ಬಿ.ವಿ. | 21–05–79 | 15–10–80 |
| 56. | ರಂಗಧಾಮಯ್ಯ.ಟಿ. | 17–01–81 | 17–01–81 |
| 57. | ಪಾಲಾಕ್ಷಪ್ಪ ಪೂಜಾರ್. | 17–01–81 | 17–01–81 |
| 58. | ನಾಗರಾಜ್.ಹೆಚ್.ಜಿ. | 17–01–81 | 17–01–81 |
| 59. | ರಂಗಸ್ವಾಮಯ್ಯ ಎಂ. | 17–09–81 | 17–01–81 |
| 60. | ಯಮಕನ ಮರಡಿ.ಸಿ.ಎಂ. | 07–08–82 | 17–01–81 |
| 61. | ಓಿತಿ ಶರಣಪ್ಪ | 17–01–81 | 01–05–81 |
| 62. | ನಾರಾಯಣ ರೆಡ್ಡಿ.ಬಿ. | 30–04–79 | 16–07–81 |
| 63. | ಶಹೀದಾ ಬೇಗಂ. | 01–01–77 | 31–10–81 |
| 64. | ಸಬ್ದತ್ ಖಾನ್.ಎಂ.ಆರ್. | 29–04–81 | 31–10–81 |
| 65. | ಲೋಣಿಕರ್.ಎಸ್.ಎಂ. | 17–01–81 | 31–10–81 |
| 66. | ರಂಗಸ್ವಾಮಿ ಎಂ. | 07–08–82 | 31–10–81 |
| 67. | ಗೆಟ್ರೂಡ್ ಜೆ. | 20–03–82 | 04–12–81 |
| 68. | ನಾರಾಯಣಯ್ಯ.ಡಿ. | 08–03–79 | 04–12–81 |
| 69. | ನೀಲವೇಣಿ.ಟಿ.ಎಂ.ಪಿ. | 17–01–81 | 20–03–82 |
| 70. | ಶಿಂಗೆ ಎಲ್.ಕೆ. | 30–04–76 | 07–08–82 |
| 71. | ಹುಯಿಲ್ಗೋಲ್.ಆರ್.ಎಲ್. | 07–08–82 | 07–08–82 |
| 72. | ರಾಜು.ಹೆಚ್. | 07–08–82 | 07–08–82 |
| 73. | ಗಲಗಲಿ.ಜೆ.ಆರ್. | 07–08–82 | 07–08–82 |
| 74. | ದುರ್ಗಾಂಬ.ಎನ್.ಜಿ. | 07–08–82 | 07–08–82 |
| 75. | ಜನಾರ್ಧನ.ಜಿ.ಎಸ್. | 29–04–81 | 07–08–82 |
| 76. | ಸುಶೀಲಾ.ಎಂ. | 08–03–79 | 07–08–82 |
| 77. | ಗಂಗಮ್ಮ.ಪಿ.ಎಸ್. | 17–01–81 | 07–08–82 |
| 78. | ಚಂದ್ರಶೇಖರ ಭಟ್.ಎಸ್.ಕೆ. | 07–08–82 | 07–08–82 |
| 79. | ಅಬ್ದುಲ್ ಜಲೀಲ್ | 07–08–82 | 07–08–82 |
| 80. | ಶೇಷಗಿರಿ ರಾವ್.ಸಿ.ಎ. | 29–04–81 | 07–08–82 |
| 81. | ಪ್ರೇಮ ಕುಮಾರಿ.ಸಿ. | 07–08–82 | 07–08–82 |
| 82. | ಹೊಳೆಹೊಸೂರ್.ಸಿ.ಎನ್. | 07–08–82 | 07–08–82 |
| 83. | ಚಂದ್ರ.ಎಸ್.ಎಂ. | 07–08–82 | 07–08–82 |

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು | ವಾಸ್ತವ ಪದೋನ್ನತಿ ದಿನಾಂಕ | ಅರ್ಹತಾ ದಿನಾಂಕ |
|---|---|---|---|
| 84. | ಸುಬ್ಬರಾವ್.ಎಂ.ಪಿ. | 07–08–82 | 07–08–82 |
| 85. | ಮೇಟಿ.ವಿ.ಎನ್. | 07–08–82 | 07–08–82 |
| 86. | ಮಹದೇವಯ್ಯ. | 31–01–83 | 09–12–82 |
| 87. | ಕರ್ಜಗಿ.ಎ.ಡಿ. | 22–05–87 | 20–12–82 |
| 88. | ರಾಮ ಸ್ವಾಮಿ.ಎಂ.ವಿ. | 30–03–78 | 20–12–82 |
| 89. | ಬಗರೆ.ಎಂ.ಹೆಚ್. | 31–01–83 | 06–01–83 |
| 90. | ಚನ್ನಾರೆಡ್ಡಿ.ಆರ್.ಎಸ್. | 31–01–83 | 06–01–83 |
| 91. | ಸಂಪಗಾಂವ್. ಐ.ಬಿ. | 31–01–83 | 31–01–83 |
| 92. | ಸೈಯ್ಯದ್ ಫಜಾಲುಲ್ಲಾ. | 31–01–83 | 31–01–83 |
| 93. | ಚಿಪ್ಪಲ ಗಟ್ಟಿ.ಎನ್.ಹೆಚ್. | 31–01–83 | 31–01–83 |
| 94. | ಕೃಷ್ಣಪ್ಪ.ಕೆ. | 31–01–83 | 31–01–83 |
| 95. | ವಾಲಿ.ಎಸ್.ಎಸ್. | 30–04–86 | 31–01–83 |
| 96. | ಪಾಟೀಲ್.ಎಸ್.ಹೆಚ್. | 07–08–82 | 31–01–83 |
| 97. | ಶಿಂಧೆ.ವೈ.ಬಿ. | 07–08–82 | 31–01–83 |
| 98. | ಶಿವಮೂರ್ತಿ.ಕೆ.ಜಿ. | 07–08–82 | 31–01–83 |
| 99. | ಕೃಷ್ಣಮೂರ್ತಿ.ಕೆ.ಎನ್. | 31–01–83 | 31–01–83 |
| 100. | ಈಟಿಯವರ್.ಹೆಚ್.ವೈ. | 31–01–83 | 31–01–83 |
| 101. | ರಾಜಶೇಖರ್.ಕೆ.ಟಿ. | 07–08–82 | 31–01–83 |
| 102. | ಲಿಟಿಸಿಯಾ ಪೈರ್ಸ್ | 31–01–83 | 31–01–83 |
| 103 | ಸುಮನ್ ಎಂ.ಎಸ್. | 31–01–83 | 31–01–83 |
| 104. | ಮಣ್ಣೂರ್.ಎಸ್.ಆರ್. | 31–01–83 | 31–01–83 |
| 105. | ಪಾಟೀಲ್ ಟಿ.ಜೆ. | 31–03–83 | 07–03–83 |
| 106. | ಸರೋಜಾ.ಎಸ್. | 31–03–83 | 07–03–83 |
| 107. | ವೇದಾವತಿ.ಎಸ್.ರೈ. | 26–03–87 | 17–04–83 |
| 108. | ಗಣಪತಯ್ಯ.ಹೆಚ್.ಕೆ. | 07–08–82 | 11–05–83 |
| 109. | ಸಿಂಗ್.ಡಿ.ಎಲ್. | 25–07–77 | 08–10–84 |
| 110. | ರಹತ್ ಜನ್. | 18–07–85 | 18–07–85 |
| 111. | ದೇಶಪಾಂಡೆ.ಎಸ್.ಬಿ. | 08–10–84 | 18–07–85 |
| 112. | ದುರ್ಗಾದಾಸ್. | 18–07–85 | 18–07–85 |
| 113. | ತೆರಸಾಬಾಯಿ. | 30–04–86 | 18–07–85 |
| 114. | ಶಿವಮೂರ್ತಿ.ಕೆ. | 30–04–86 | 18–07–85 |
| 115. | ಸಂಪತ್ ಕುಮಾರ್.ಎಂ.ಕೆ. | 31–01–83 | 18–07–85 |
| 116. | ಗೋಪಾಲ್ ಎಂ.ಜಿ. | 31–01–83 | 30–04–86 |
| 117. | ಶಿವಲಿಂಗೇಗೌಡ.ಎ.ಎಸ್. | 31–01–83 | 30–04–86 |
| 118. | ಗೋಪಾಲ್ | 31–01–83 | 30–04–86 |
| 119. | ಗುರುನಾಥ್.ವೈ. | 18–07–85 | 30–04–86 |
| 120. | ರಾಜಾರಾವ್.ಟಿ.ಎನ್. | 18–07–85 | 26–03–87 |
| 121. | ಕನಕಾಂಬುಜ. | 02–05–89 | 26–03–87 |
| 122. | ವೆಂಕಟಾಚಲಂ.ಎಂ. | 26–03–87 | 22–05–87 |
| 123. | ಶೇಕ್.ಎಂ.ಹೆಚ್. | 18–07–85 | 28–05–87 |
| 124. | ಬಸವಣ್ಣೆಪ್ಪ.ಸಿ. | 17–01–81 | 29–02–88 |
| 125. | ಶಿವಶರಣಪ್ಪ | 02–05–89 | 02–05–89 |
| 126. | ಪ್ರಭುಸ್ವಾಮಿ.ಟಿ.ಜಿ. | 02–05–89 | 02–05–89 |
| 127. | ಲಾಲ್ ಸಿಂಗ್.ನಾಯಕ್ | | 02–05–89 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1400

**ವಿ. ಶಿವಕುಮಾರ್**

ಸರ್ಕಾರದ ಅಧೀನಕಾರ್ಯದರ್ಶಿ–2,

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ತಾಲ್ಲೂಕು ಮಟ್ಟದ ಪ್ರಕೃತಿ ವಿಕೋಪ ಪರಿಹಾರ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಪತ್ರ ಸಂಖ್ಯೆ: ಕಂಇ 89 ಟಿಎಸ್‌ವೈ 95, ದಿ: 18.8.95

2. ಸರ್ಕಾರದ ಪತ್ರ ಸಂಖ್ಯೆ: ಕಂಇ 89 ಟಿಎಸ್‌ವೈ 95, ದಿ: 16.9.2002

3. ಸರ್ಕಾರದ ಪತ್ರ ಸಂಖ್ಯೆ: ಕಂಇ 89 ಟಿಎಸ್‌ವೈ 95, 18.2.2005

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರದ ಪತ್ರ ಸಂಖ್ಯೆ: ಕಂಇ 89 ಟಿಎಸ್‌ವೈ 95 ದಿನಾಂಕ: 18.8.95ರಲ್ಲಿ ಪರಿಹಾರ ಕಾರ್ಯಗಳ ಪರಿಶೀಲನೆ ಮತ್ತು ಮೇಲ್ವಿಚಾರಣೆಗಾಗಿ ವಿಧಾನಸಭಾ ಸದಸ್ಯರ ಅಧ್ಯಕ್ಷತೆಯಲ್ಲಿ ಬರ ಪರಿಹಾರ ಉಸ್ತುವಾರಿ ಸಮಿತಿಯನ್ನು ಈ ಕೆಳಕಂಡ ಸದಸ್ಯರನ್ನೊಳಗೊಂಡಂತೆ ರಚಿಸುವಂತೆ ಜಿಲ್ಲಾಧಿಕಾರಿಗಳಿಗೆ ತಿಳಿಸಲಾಗಿತ್ತು:

| | | | |
|---|---|---|---|
| ೧. | ಸಂಬಂಧಿಸಿದ ವಿಧಾನಸಭಾ ಸದಸ್ಯರು | - | ಅಧ್ಯಕ್ಷರು |
| ೨. | ಸಂಬಂಧಿಸಿದ ವಿಧಾನಪರಿಷತ್ ಸದಸ್ಯರು | - | ಸದಸ್ಯರು |
| ೩. | ತಾಲ್ಲೂಕು ಪಂಚಾಯತ್ ಅಧ್ಯಕ್ಷರು | - | ಸದಸ್ಯರು |
| ೪. | ತಾಲ್ಲೂಕು ಪಂಚಾಯತ್ ಕಾರ್ಯನಿರ್ವಹಣಾಧಿಕಾರಿಗಳು | - | ಸದಸ್ಯರು |
| ೫. | ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರ್, ಜಿಲ್ಲಾ ಪಂಚಾಯತ್ | - | ಸದಸ್ಯರು |
| ೬. | ತಹಶೀಲ್ದಾರ್ | - | ಸದಸ್ಯ ಕಾರ್ಯದರ್ಶಿ |

ದಿ: 16.9.2002ರ ಪತ್ರದಲ್ಲಿ ತಾಲ್ಲೂಕು ಮಟ್ಟದ ಬರ ಪರಿಹಾರ ಪರಿವೀಕ್ಷಣಾ ಸಮಿತಿಗೆ ತಾಲ್ಲೂಕಿನಲ್ಲಿ ಅತ್ಯಂತ ಹೆಚ್ಚಿನ ಪ್ರದೇಶವನ್ನು ಪ್ರತಿನಿಧಿಸುವ ವಿಧಾನಸಭಾ ಸದಸ್ಯರ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ರಚಿಸುವಂತೆ ತಿಳಿಸಲಾಗಿತ್ತು. ಮೇಲೆ ಓದಲಾದ ದಿ:18.2.2005ರ ಪತ್ರದಲ್ಲಿ ತಾಲ್ಲೂಕಿಗೆ ಸಂಬಂಧಿಸಿದ ಎಲ್ಲಾ ವಿಧಾನ ಪರಿಷತ್ ಸದಸ್ಯರನ್ನು ಸಮಿತಿಯ ಸದಸ್ಯರನ್ನಾಗಿ ನೇಮಿಸುವಂತೆ ತಿಳಿಸಲಾಗಿತ್ತು.

ಸರ್ಕಾರವು ಈ ಮೇಲಿನ ಎಲ್ಲಾ ಆದೇಶಗಳನ್ನು ಮರು ಪರಿಶೀಲಿಸಿ, ವಿಧಾನಸಭಾ ಸದಸ್ಯರ ಅಧ್ಯಕ್ಷತೆಯಲ್ಲಿ ತಾಲ್ಲೂಕು ಮಟ್ಟದ ಪ್ರಕೃತಿ ವಿಕೋಪ ಪರಿಹಾರ ಸಮಿತಿ ರಚಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 372 ಟಿಎನ್‌ಆರ್ 2006, ಬೆಂಗಳೂರು, ದಿನಾಂಕ: 10ನೇ ಅಕ್ಟೋಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ವಿಧಾನಸಭೆ ಸದಸ್ಯರ ಅಧ್ಯಕ್ಷತೆಯಲ್ಲಿ ತಾಲ್ಲೂಕು ಮಟ್ಟದ ಪ್ರಕೃತಿ ವಿಕೋಪ ಪರಿಹಾರ ಸಮಿತಿಯನ್ನು ಈ ಕೆಳಕಂಡಂತೆ ಪುನರ್ ರಚಿಸಿ ಆದೇಶಿಸಲಾಗಿದೆ:

| | | | |
|---|---|---|---|
| 1. | ಸಂಬಂಧಿಸಿದ ವಿಧಾನಸಭಾ ಸದಸ್ಯರು | - | ಅಧ್ಯಕ್ಷರು |
| 2. | ಸಂಬಂಧಿಸಿದ ವಿಧಾನಪರಿಷತ್ ಸದಸ್ಯರು | - | ಸದಸ್ಯರು |
| 3. | ತಾಲ್ಲೂಕು ಪಂಚಾಯತ್ ಅಧ್ಯಕ್ಷರು | - | ಸದಸ್ಯರು |
| 4. | ತಾಲ್ಲೂಕು ಪಂಚಾಯತ್ ಕಾರ್ಯನಿರ್ವಹಣಾಧಿಕಾರಿಗಳು | - | ಸದಸ್ಯರು |
| 5. | ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರ್, ಜಿಲ್ಲಾ ಪಂಚಾಯತ್ | - | ಸದಸ್ಯರು |
| 6. | ತಹಶೀಲ್ದಾರ್ | - | ಸದಸ್ಯ ಕಾರ್ಯದರ್ಶಿ |

ಒಂದಕ್ಕಿಂತ ಹೆಚ್ಚು ಶಾಸಕರು ಪ್ರತಿನಿಧಿಸುತ್ತಿರುವ ತಾಲ್ಲೂಕುಗಳಲ್ಲಿ ಅತ್ಯಂತ ಹೆಚ್ಚಿನ ಪ್ರದೇಶವನ್ನು ಪ್ರತಿನಿಧಿಸುವ ವಿಧಾನಸಭಾ ಸದಸ್ಯರು ಸಮಿತಿಯ ಅಧ್ಯಕ್ಷರಾಗಿರುತ್ತಾರೆ.

ಈ ಸಮಿತಿಯು:

1. ಬಿಡುಗಡೆಯಾದ ಅನುದಾನಕ್ಕೆ ತಕ್ಕಂತೆ ಪ್ರಕೃತಿ ವಿಕೋಪ ಪರಿಹಾರ ಕಾಮಗಾರಿಗಳಿಗೆ ಪ್ರಕೃತಿ ವಿಕೋಪ ಮಾರ್ಗಸೂಚಿಗಳನ್ವಯ ಕ್ರಿಯಾ ಯೋಜನೆ ತಯಾರಿಸುವುದು
2. ಗಂಜಿ ಕೇಂದ್ರ / ಗೋಶಾಲೆ ತೆರೆಯಲು ಜಿಲ್ಲಾಮಟ್ಟದ ಸಮಿತಿಗೆ ಶಿಫಾರಸ್ಸು ಮಾಡುವುದು
3. ಪ್ರಕೃತಿ ವಿಕೋಪ ಪರಿಹಾರ ಕಾಮಗಾರಿಗಳ ಅನುಷ್ಠಾನ ಹಾಗೂ ಉಸ್ತುವಾರಿ ಇತ್ಯಾದಿ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ದೇಸಾಯಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ)

ಪಿ.ಆರ್. 1499

**ವಿಷಯ:** ಜಿಲ್ಲಾ ಉಸ್ತುವಾರಿ ಸಚಿವರ ಅಧ್ಯಕ್ಷತೆಯಲ್ಲಿ ಜಿಲ್ಲಾ ಮಟ್ಟದ ಪ್ರಕೃತಿ ವಿಕೋಪ ಪರಿಹಾರ ಸಮಿತಿ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಕಂಇ 68 ಟಿಎಸ್‌ವೈ 2002, ದಿ: 7.4.2005

2. ಸರ್ಕಾರದ ಆದೇಶ ಸಂಖ್ಯೆ: ಕಂಇ 300 ಟಿಎನ್‌ಆರ್ 2006, ದಿ: 16.8.2006

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರದ ಆದೇಶ ಸಂಖ್ಯೆ: ಕಂಇ 68 ಟಿಎಸ್‌ವೈ 2002 ದಿನಾಂಕ: 7.4.2005ರಲ್ಲಿ ಪ್ರಕೃತಿ ವಿಕೋಪಗಳಡಿಯಲ್ಲಿ ಪರಿಹಾರ ಕಾರ್ಯಗಳ ಪರಿವೀಕ್ಷಣೆಗಾಗಿ ಜಿಲ್ಲಾ ಉಸ್ತುವಾರಿ ಸಚಿವರ ಅಧ್ಯಕ್ಷತೆಯಲ್ಲಿ ಜಿಲ್ಲಾ ಮಟ್ಟದ ಪ್ರಕೃತಿ ವಿಕೋಪ ಪರಿಹಾರ ಸಮಿತಿಯನ್ನು ರಚಿಸಲಾಗಿತ್ತು ಹಾಗೂ ಸರ್ಕಾರದ ಆದೇಶ ಸಂಖ್ಯೆ: ಕಂಇ 300 ಟಿಎನ್‌ಆರ್ 2006, ದಿನಾಂಕ: 16.8.2006ರಲ್ಲಿ ಜಿಲ್ಲಾ ಉಸ್ತುವಾರಿ ಪ್ರಧಾನ ಕಾರ್ಯದರ್ಶಿಗಳು/ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಪ್ರಕೃತಿ ವಿಕೋಪ ಪರಿಹಾರ ಸಮಿತಿಯನ್ನು ರಚಿಸಲಾಗಿತ್ತು. ಈ ಎರಡೂ ಆದೇಶಗಳನ್ನು ಮರುಪರಿಶೀಲಿಸಿ ಜಿಲ್ಲಾ ಮಟ್ಟದಲ್ಲಿ ಪ್ರಕೃತಿ ವಿಕೋಪ ಪರಿಹಾರ/ ರಾಷ್ಟ್ರೀಯ ವಿಪತ್ತು ಸಾದಿಲ್ವಾರು ನಿಧಿಗಳಡಿಯಲ್ಲಿ ಕೈಗೊಳ್ಳಬೇಕಾದ ಕಾಮಗಾರಿಗಳನ್ನು ಜಿಲ್ಲಾ ಉಸ್ತುವಾರಿ ಸಚಿವರ ಅಧ್ಯಕ್ಷತೆಯಲ್ಲಿ ರಚಿಸಲಾಗಿರುವ ಜಿಲ್ಲಾ ಮಟ್ಟದ ಪ್ರಕೃತಿ ವಿಕೋಪ ಪರಿಹಾರ ಸಮಿತಿಯ ಅನುಮೋದನೆ ಪಡೆಯುವುದು ಅವಶ್ಯವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 372 ಟಿಎನ್‌ಆರ್ 2006, ಬೆಂಗಳೂರು, ದಿನಾಂಕ: 10ನೇ ಅಕ್ಟೋಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಜಿಲ್ಲಾ ಉಸ್ತುವಾರಿ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ರಚಿಸಲಾಗಿರುವ ಸಮಿತಿಯು ಜಿಲ್ಲಾಮಟ್ಟದಲ್ಲಿ ಪ್ರಕೃತಿ ವಿಕೋಪ ಪರಿಹಾರ(CRF) ರಾಷ್ಟ್ರೀಯ ವಿಪತ್ತು ಸಾದಿಲ್ವಾರು ನಿಧಿಗಳಡಿಯಲ್ಲಿ (NCCF) ಕೈಗೊಳ್ಳಬೇಕಾದ ಕಾಮಗಾರಿಗಳನ್ನು ಜಿಲ್ಲಾ ಉಸ್ತುವಾರಿ ಸಚಿವರ ಅಧ್ಯಕ್ಷತೆಯಲ್ಲಿ ರಚಿಸಲಾಗಿರುವ ಜಿಲ್ಲಾ ಮಟ್ಟದ ಪ್ರಕೃತಿ ವಿಕೋಪ ಪರಿಹಾರ ಸಮಿತಿಯ ಅನುಮೋದನೆ ಪಡೆಯಬೇಕೆಂದು ಆದೇಶಿಸಲಾಗಿದೆ.

ಜಿಲ್ಲಾ ಉಸ್ತುವಾರಿ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ರಚಿಸಲಾಗಿರುವ ಸಮಿತಿಯು ಪ್ರಕೃತಿ ವಿಕೋಪ ಪರಿಹಾರ ಕಾಮಗಾರಿಗಳ ಪರಿವೀಕ್ಷಣೆ ಮಾಡುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್.ದೇಸಾಯಿ**

ಪಿ.ಆರ್. 1512

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ)

## ಶಿಕ್ಷಣ ಸಚಿವಾಲಯ

**ವಿಷಯ:–** ಗುಲ್ಬರ್ಗಾದ ಸರ್ಕಾರಿ ಮಹಿಳಾ ಪಾಲಿಟೆಕ್ನಿಕ್ ವಿದ್ಯಾರ್ಥಿ ವಸತಿ ನಿಲಯದ ಕಟ್ಟಡ ನಿರ್ಮಾಣಕ್ಕೆ ಆಡಳಿತಾತ್ಮಕ ಮಂಜೂರಾತಿ ನೀಡುವ ಕುರಿತು.

**ಓದಲಾಗಿದೆ:–** ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ:ಡಿ.ಟಿ.ಇ:13:ಬಿ.ಎಲ್.ಡಿ 2006: ದಿ.12.9.2006

**ಪ್ರಸ್ತಾವನೆ:–**

ಮೇಲೆ ಓದಲಾದ ದಿ.12.9.2006ರ ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರದಲ್ಲಿ ಗುಲ್ಬರ್ಗಾದ ಸರ್ಕಾರಿ ಮಹಿಳಾ ಪಾಲಿಟೆಕ್ನಿಕ್ ವಿದ್ಯಾರ್ಥಿ ವಸತಿ ನಿಲಯ ಕಟ್ಟಡ ನಿರ್ಮಾಣಕ್ಕೆ ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಗುಲ್ಬರ್ಗಾ ಇವರು ರೂ.62.00ಲಕ್ಷ ಅಂದಾಜು ಪಟ್ಟಿಯನ್ನು ಕಳುಹಿಸಿ 2006–07ನೇ ಸಾಲಿಗೆ ಲೆಕ್ಕಶೀರ್ಷಿಕೆ 4202–02–104–1–01–ಯೋಜನೆ ಯಡಿಯಲ್ಲಿ ಸದರಿ ಕಾಲೇಜಿಗೆ ವಿದ್ಯಾರ್ಥಿ ವಸತಿ ನಿಲಯ ಕಟ್ಟಡ ನಿರ್ಮಾಣಕ್ಕೆ ರೂ.55.00ಲಕ್ಷಗಳನ್ನು ಒದಗಿಸಿಕೊಳ್ಳಲಾಗಿದೆ ಎಂದು ತಿಳಿಸಿ ಉಳಿಕೆ ರೂ.7.00ಲಕ್ಷಗಳನ್ನು 2007–08ನೇ ಸಾಲಿನ ಆಯವ್ಯಯದಲ್ಲಿ ಒದಗಿಸಿಕೊಳ್ಳುವುದಾಗಿ ತಿಳಿಸಿ ಮೇಲ್ಕಂಡ ಮೊತ್ತಕ್ಕೆ ಆಡಳಿತಾತ್ಮಕ ಮಂಜೂರಾತಿಗಾಗಿ ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 225 ಯೋಯೋಕಾ 2006, ಬೆಂಗಳೂರು ದಿ.28ನೇ ಅಕ್ಟೋಬರ್ 2006**

[ಇಡಿ: 97 :ಸ್ವೀಮರ(ಯುನಿಕ್) 2006 ದಿ.28.10.2006]

ಗುಲ್ಬರ್ಗಾದ ಸರ್ಕಾರಿ ಮಹಿಳಾ ಪಾಲಿಟೆಕ್ನಿಕ್ ವಿದ್ಯಾರ್ಥಿ ವಸತಿ ನಿಲಯ ಕಟ್ಟಡ ನಿರ್ಮಾಣದ ರೂ.62.00ಲಕ್ಷ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಲು ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಸರ್ಕಾರವು ಅನುಮತಿ ನೀಡಿದೆ.

2006–07ನೇ ಸಾಲಿಗೆ ಲೆಕ್ಕಶೀರ್ಷಿಕೆ:4202–02–104–1–01–ಯೋಜನೆಯಡಿಯಲ್ಲಿಸದರಿ ಕಾಲೇಜಿಗೆ ವಿದ್ಯಾರ್ಥಿ ವಸತಿ ನಿಲಯ ಕಟ್ಟಡ ನಿರ್ಮಾಣಕ್ಕೆ ಒದಗಿಸಿಕೊಂಡಿರುವ ರೂ.55.00ಲಕ್ಷಗಳನ್ನು ಬಳಸಿ ಕೊಂಡು ಕಾಮಗಾರಿಯನ್ನು ಪ್ರಾರಂಭಿಸಲು ಅನುಮತಿ ನೀಡಲಾಗಿದೆ.

ಪ್ರತಿ ಮಾಹೆಯೂ ಎಂ.ಎಂ.ಆರ್ ವರದಿಯಲ್ಲಿ ಕಾಮಗಾರಿಯ ಭೌತಿಕ ಮತ್ತು ಆರ್ಥಿಕ ಪ್ರಗತಿ ವರದಿಯನ್ನು ತಪ್ಪದೇ ಸಲ್ಲಿಸತಕ್ಕದ್ದು. ಕಾಮಗಾರಿಯ ಗುಣಮಟ್ಟದ ಬಗ್ಗೆ ಇಲಾಖೆಯ ಜವಾಬ್ದಾರಿಯುತ ಅಧಿಕಾರಿಗಳು ಆಗಿಂದ್ದಾಗ್ಗೆ ಪರಿಶೀಲನೆ ನಡೆಸಲು ಆದೇಶಿಸಲಾಗಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಶಿಕ್ಷಣ ಇಲಾಖೆ ಅವರ ಸಹಮತಿಯನ್ನು ಅ.ಟಿ.ಸಂಖ್ಯೆ:ಶಿಇ:699: ಐಎಫ್ಎಸ್ 2006 ದಿ.20.9.2006ರಲ್ಲಿ ಪಡೆದು ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಶ್ರೀಕಂಠೇಶ್ವರ**

ಪಿ.ಆರ್. 1555

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ ಸರ್ಕಾರದ

ಸಹಕಾರ್ಯದರ್ಶಿ(ಯೋಜನೆ) ಶಿಕ್ಷಣ ಇಲಾಖೆ.

**ವಿಷಯ:–** ಕೋಲಾರ ಜಿಲ್ಲೆ ಮಾಲೂರು ತಾಲ್ಲೂಕು ಮಾಸ್ತಿಯಲ್ಲಿ ಮಾಸ್ತಿ ವೆಂಕಟೇಶ್ ಅಯ್ಯಂಗಾರ್ ಸನಿವಾಸ ಶಾಲೆ ಪ್ರಾರಂಭಿಸುವ ಕುರಿತು.

**ಓದಲಾಗಿದೆ:–** ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ: ಯೋ(1) ಹೊ.ಫ.ಪ್ರ.9/2006–07 ದಿ.24.5.2006

**ಪ್ರಸ್ತಾವನೆ:–**

ಮೇಲೆ ಓದಲಾದ ದಿ.24.5.2006ರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರದಲ್ಲಿ ಶ್ರೀ ಮಾಸ್ತಿ ವೆಂಕಟೇಶ್ ಅಯ್ಯಂಗಾರ್ ರವರ ಸವಿನೆನಪಿಗಾಗಿ 2006–07ನೇ ಸಾಲಿನಲ್ಲಿ ಕೋಲಾರ ಜಿಲ್ಲೆ ಮಾಲೂರು ತಾಲ್ಲೂಕಿನ ಮಾಸ್ತಿಯಲ್ಲಿ ಮಾಸ್ತಿ ವೆಂಕಟೇಶ್ ಅಯ್ಯಂಗಾರ್ ವಸತಿಶಾಲೆ ಯನ್ನು 2006–07ನೇ ಸಾಲಿನಿಂದ ಪ್ರಾರಂಭಿಸಲು ಒಟ್ಟು ರೂ.573.61ಲಕ್ಷಗಳನ್ನು ಅಂದಾಜಿಸಿದ್ದು, 2006–07 ನೇ ಸಾಲಿಗೆ ಇದಕ್ಕಾಗಿ ಲೆಕ್ಕಶೀರ್ಷಿಕೆ:2202–80–800–0–32–059(ಯೋಜನೆಯಡಿ)ಯಲ್ಲಿ ರೂ.100.00ಲಕ್ಷ ಗಳನ್ನು ಒದಗಿಸಲಾಗಿದೆ ಎಂದು ತಿಳಿಸಿ ಹೆಚ್ಚುವರಿ ಅನುದಾನ ಒದಗಿಸಿ ಪ್ರಸಕ್ತ ಸಾಲಿನಲ್ಲಿ ಆರನೇ ತರಗತಿಯನ್ನು ಪ್ರಾರಂಭಿಸಲು ಸರ್ಕಾರದ ಅನುಮತಿ ನೀಡುವಂತೆ ಕೋರಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 144 ಯೋಯೋಕಾ 2006, ಬೆಂಗಳೂರು ದಿ.20ನೇ ಅಕ್ಟೋಬರ್ 2006**

**[ಇಡಿ: 95 :ಸ್ವೀಮರ (ಯುನಿಕ್) 2006:ದಿ.20.10.2006]**

ಶ್ರೀ ಮಾಸ್ತಿ ವೆಂಕಟೇಶ ಐಯ್ಯಂಗಾರ್‌ರವರ, ಸವಿ ನೆನಪಿಗಾಗಿ ಶ್ರೀ ಮಾಸ್ತಿ ವೆಂಕಟೇಶ ಐಯ್ಯಂಗಾರ್ ವಸತಿ ಶಾಲೆಯನ್ನು ಈ ಕೆಳಕಂಡ ಷರತ್ತುಗಳನ್ನೊಳಗೊಂಡಂತೆ ಪ್ರಾರಂಭಿಸಲು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಅನುಮತಿ ನೀಡಲಾಗಿದೆ.

2006–07ನೇ ಸಾಲಿಗೆ ಲೆಕ್ಕಶೀರ್ಷಿಕೆ:2202–80–800–0–32–059(ಯೋಜನೆಯಡಿ)ಯಲ್ಲಿ ರೂ.100.00ಲಕ್ಷ ಗಳ ಆಯವ್ಯಯವನ್ನು ಬಿಡುಗಡೆ ಮಾಡಲಾಗಿದೆ.

- ಶ್ರೀ ಮಾಸ್ತಿ ವೆಂಕಟೇಶ ಐಯ್ಯಂಗಾರ್‌ರವರ ಸನಿವಾಸ ಶಾಲೆಯನ್ನು ಮಾಸ್ತಿ, ಮಾಲೂರು ತಾಲ್ಲೂಕು, ಕೋಲಾರ ಜಿಲ್ಲೆಯಲ್ಲಿ 2006–07ನೇ ಸಾಲಿನಿಂದ ಪ್ರಾರಂಭಿಸುವಲ್ಲಿ ಕ್ರಮ ಕೈಗೊಳ್ಳುವುದು.
- 2006–07ನೇ ಸಾಲಿಗೆ 6ನೇ ತರಗತಿಯನ್ನು ಪ್ರಾರಂಭಿಸಿ ಪ್ರತಿ ತರಗತಿಗೆ 50 ವಿದ್ಯಾರ್ಥಿಗಳಂತೆ ಆಯ್ಕೆ ಮಾಡಿಕೊಂಡು 6 ರಿಂದ 10ನೇ ತರಗತಿವರೆಗೆ ಪ್ರತಿವರ್ಷ ಸ್ವಾಭಾವಿಕ ಬೆಳವಣಿಗೆಯಂತೆ ಒಟ್ಟು 5 ವರ್ಷಗಳಲ್ಲಿ 6 ರಿಂದ 10ನೇ ತರಗತಿವರೆಗೆ ಒಟ್ಟು 250 ಮಕ್ಕಳ ವಸತಿ ಶಾಲೆಯನ್ನು ಹೊಂದುವುದು.
- 6ನೇ ತರಗತಿಗೆ 50 ಮಕ್ಕಳನ್ನು ಹೊಂದುವಲ್ಲಿ, ಇದರಲ್ಲಿ 25 ವಿದ್ಯಾರ್ಥಿಗಳು(ಶೇಕಡ 50) ಕೋಲಾರ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆ ಅಂದರೆ ಕೋಲಾರ ರೆವೆನ್ಯೂ ಜಿಲ್ಲೆಯ ಮಕ್ಕಳಿಗೆ ಮೀಸಲಿಟ್ಟು, ಉಳಿಕೆ 25 ವಿದ್ಯಾರ್ಥಿಗಳನ್ನು ರಾಜ್ಯದ ವಿವಿಧ ಜಿಲ್ಲೆಗಳಿಂದ ಆಯ್ಕೆ ಮಾಡಿ ಕೊಳ್ಳುವುದು. ಈ ಸಂಬಂಧ ಆಯಾ ಜಿಲ್ಲಾ ಮೊರಾರ್ಜಿ ದೇಸಾಯಿ ಶಾಲೆಗಳಿಗೆ ಆಯ್ಕೆಯಾಗುವ ಪ್ರಕ್ರಿಯೆಯಲ್ಲಿ ಸೂಕ್ತ ಕ್ರಮ ಕೈಗೊಂಡು ಮೀಸಲಾತಿಯನ್ವಯ ಆಯ್ಕೆ ಮಾಡಿಕೊಳ್ಳತಕ್ಕದ್ದು.
- ಸದರಿ ವಸತಿ ಶಾಲೆಯನ್ನು ಮಾಸ್ತಿ, ಮಾಲೂರು ತಾಲ್ಲೂಕು, ಕೋಲಾರ ಜಿಲ್ಲೆ ಇಲ್ಲಿ ಹಾಲಿ ಇರುವ ಸರ್ಕಾರಿ ಮಾದರಿ ಹಿರಿಯ ಪ್ರಾಥಮಿಕ ಶಾಲೆ, ಮತ್ತು ಸರ್ಕಾರಿ ಪ್ರೌಢಶಾಲೆ ಈ ಶಾಲೆಗಳ ಆವರಣದಲ್ಲಿ ಪ್ರಾರಂಭಿಸತಕ್ಕದ್ದು.
- ಈ ವಸತಿ ಶಾಲೆಗೆ 6ನೇ ತರಗತಿಗೆ ಆಯ್ಕೆಯಾಗುವ ಮಕ್ಕಳನ್ನು ಪ್ರತ್ಯೇಕವಾಗಿ ಪರಿಗಣಿಸದೆ ಸದರಿ ಶಾಲೆಗಳಲ್ಲಿರುವ ಇತರೆ ವಿದ್ಯಾರ್ಥಿಗಳೊಂದಿಗೆ ಪರಿಗಣಿಸತಕ್ಕದ್ದು.
- ಈ ವಸತಿ ಶಾಲೆಗೆ ಆಯ್ಕೆಯಾಗಿರುವ ವಿದ್ಯಾರ್ಥಿಗಳಿಗೆ ಮಾತ್ರ ಊಟೋಪಚಾರ, ವಸತಿ, ಸಮವಸ್ತ್ರ ಮುಂತಾದ ವಸತಿ ಶಾಲಾ ವಿಶೇಷ ಸವಲತ್ತುಗಳನ್ನು ನೀಡುವುದು. ಉಳಿದಂತೆ ಸದರಿ ಶಾಲೆಯ ಮಕ್ಕಳೊಂದಿಗೆ ಶೈಕ್ಷಣಿಕ ಚಟುವಟಿಕೆಗಳಲ್ಲಿ ಸಹಭಾಗಿಗಳಾಗತಕ್ಕದ್ದು. ಇವುಗಳಿಗೆ ಈಗಾಗಲೇ ಮೊರಾರ್ಜಿದೇಸಾಯಿ ವಸತಿ ಶಾಲೆಗಳಿಗೆ ನಿಗಧಿಪಡಿಸಿರುವ ದರಗಳಂತೆ ವೆಚ್ಚವನ್ನು ಭರಿಸತಕ್ಕದ್ದು.
- 1 ರಿಂದ 10 ನೇ ತರಗತಿಯ ಎಲ್ಲಾ ವಿದ್ಯಾರ್ಥಿಗಳಿಗೂ ಮಧ್ಯಾಹ್ನ ಉಪಹಾರವನ್ನು ನೀಡತಕ್ಕದ್ದು.

- ಹಾಲಿ ಮಾಸ್ತಿಯಲ್ಲಿರುವ ಸರ್ಕಾರಿ ಮಾದರಿ ಹಿರಿಯ ಪ್ರಾಥಮಿಕ ಶಾಲೆ ಮತ್ತು ಸರ್ಕಾರಿ ಪ್ರೌಢ ಶಾಲೆ ವಿಭಾಗವನ್ನು ಏಕೀಕರಣಗೊಳಿಸಿ (Intigration)ಇದನ್ನು ಸಂಪೂರ್ಣ ಅಥವಾ ಸಮಗ್ರ (Intigrated) ಶಾಲೆಯನ್ನಾಗಿ ಮಾಡತಕ್ಕದ್ದು. 1 ರಿಂದ 10ನೇ ತರಗತಿವರೆಗಿನ ಎಲ್ಲಾ ಆಡಳಿತಾತ್ಮಕ ಚಟುವಟಿಕೆಗಳನ್ನು ಸದರಿ ವಸತಿ ಶಾಲೆಯ ಮುಖ್ಯಸ್ಥರಿಗೆ ವಹಿಸಿ 1 ರಿಂದ 7ನೇ ತರಗತಿಯ ಮುಖ್ಯಸ್ಥರು ಆ ತರಗತಿಗಳ ಶೈಕ್ಷಣಿಕ ಚಟುವಟಿಕೆಗಳನ್ನು ಮಾತ್ರ ನಿರ್ವಹಿಸುವಲ್ಲಿ ವ್ಯವಸ್ಥೆ ಗೊಳಿಸತಕ್ಕದ್ದು. ಈ ಬಗ್ಗೆ ಆಯಾ ಮುಖ್ಯಸ್ಥರ ಅಧಿಕಾರ ಹಂಚಿಕೆ ಬಗ್ಗೆ ಪ್ರತ್ಯೇಕ ಆದೇಶ ನೀಡಲು ಕ್ರಮ ಕೈಗೊಳ್ಳತಕ್ಕದ್ದು. ಈ ಸಮಗ್ರ ಶಾಲೆಯ ಎಲ್ಲ ವಿದ್ಯಾರ್ಥಿಗಳಿಗೆ ಉತ್ತಮ ಗುಣಮಟ್ಟದ ಶಿಕ್ಷಣ ನೀಡಲು ಅಗತ್ಯವಿರುವ ಪೀಠೋಪಕರಣಗಳೂ, ಪಾಠೋಪಕರಣಗಳೂ, ಗ್ರಂಥಾಲಯ, ಪ್ರಯೋಗಾಲಯ, ಶಾಲಾ ಕೊಠಡಿಗಳೂ ಅವಶ್ಯಕ ಸಿಬ್ಬಂದಿಯನ್ನು ನೀಡತಕ್ಕದ್ದು.
- ಇದಕ್ಕೆ ಸಂಬಂಧಿಸಿದ ವೆಚ್ಚವನ್ನು ಮೇಲೆ ನಮೂದಿಸಿರುವ ಆಯವ್ಯಯ ಲೆಕ್ಕ ಶೀರ್ಷಿಕೆಯಡಿ ನಿಗಧಿಯಾದ ಮೊತ್ತದ ಮಿತಿಯೊಳಗೆ ಭರಿಸುವುದು.

ಈ ಆದೇಶವನ್ನು ಯೋಜನೆ ಮತ್ತು ಆರ್ಥಿಕ ಇಲಾಖೆಗಳು ಕ್ರಮವಾಗಿ ಪಿಡಿ 68 ಎಂ ಅಂಡ್ ಇ 2006 ದಿನಾಂಕ 11.9.2006 ಮತ್ತು ಆ.ಇ. 751 ವೆಚ್ಚ-8 2006 ದಿನಾಂಕ 19.8.2006 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ. ಶ್ರೀಕಂಠೇಶ್ವರ**
ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ ಸರ್ಕಾರದ
ಸಹಕಾರ್ಯದರ್ಶಿ(ಯೋಜನೆ) ಶಿಕ್ಷಣ ಇಲಾಖೆ.

ಪಿ.ಆರ್. 1558

**ವಿಷಯ:–** ಮೈಸೂರು ಜಿಲ್ಲೆಯ ಕೆ.ಆರ್. ನಗರ ತಾಲ್ಲೂಕಿನ ಸಾಲಿಗ್ರಾಮದಲ್ಲಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜನ್ನು ಮತ್ತು ಉಡುಪಿ ಜಿಲ್ಲೆಯ ಹಿರಿಯಡ್ಕದಲ್ಲಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜನ್ನು ತೆರೆಯುವ ಬಗ್ಗೆ.

**ಓದಲಾಗಿದೆ:–** 1.ಸನ್ಮಾನ್ಯ ಮುಖ್ಯ ಮಂತ್ರಿಯವರ ನಡವಳಿ ಸಂಖ್ಯೆ ಸಿಎಂ.2434:ಎಸ್‌ಪಿಸಿ 06 ದಿ.29.06.2006
2.ದಿನಾಂಕ:10.8.2006ರಂದು ಮಾನ್ಯ ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳು
3.ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ: ಕಾಶಿಇ-05-ಯೋಜನೆ-2005-06 ದಿ.25.7.2006
4.ಸರ್ಕಾರಿ ಆದೇಶಸಂಖ್ಯೆ:ಎಫ್‌ಡಿ301 ಬಿ.ಆರ್.ಎಸ್ 2006 ದಿ. 18.10.2006

**ಪ್ರಸ್ತಾವನೆ:–**

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಮೇಲೆ (1)ರಲ್ಲಿ ಓದಲಾದ ನಡವಳಿಯಲ್ಲಿ ಮೈಸೂರು ಜಿಲ್ಲೆ ಕೆ.ಆರ್.ನಗರ ತಾಲ್ಲೂಕು ಸಾಲಿಗ್ರಾಮದಲ್ಲಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜನ್ನು ಪ್ರಾರಂಭಿಸಲು ಕ್ರಮ ತೆಗೆದುಕೊಳ್ಳಲು ಆದೇಶಿಸಿದ್ದಾರೆ. ಮೇಲೆ (2)ರಲ್ಲಿ ಓದಲಾದ ಸಭೆಯ ನಡವಳಿಯಲ್ಲಿ ಇತರ ಸ್ಥಳಗಳ ಜೊತೆಗೆ ಮೈಸೂರು ಜಿಲ್ಲೆ ಕೆ.ಆರ್.ನಗರ ತಾಲ್ಲೂಕು ಸಾಲಿಗ್ರಾಮದಲ್ಲಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜನ್ನು ಪ್ರಾರಂಭಿಸಲು ಕ್ರಮ ತೆಗೆದುಕೊಳ್ಳಲು ತೀರ್ಮಾನಿಸಲಾಗಿತ್ತು. ಅದರಂತೆ ಮೇಲೆ (3)ರಲ್ಲಿ ಓದಲಾದ ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರುರವರ ಪತ್ರದಲ್ಲಿ ಮೈಸೂರು ಜಿಲ್ಲೆ ಕೆ.ಆರ್.ನಗರ ತಾಲ್ಲೂಕು ಸಾಲಿಗ್ರಾಮದಲ್ಲಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜನ್ನು 2006-07ನೇ ಸಾಲಿನಿಂದ ಪ್ರಾರಂಭಿಸಲು ಪ್ರಸ್ತಾವನೆಯನ್ನು ಸಲ್ಲಿಸಿ ಶೀಘ್ರ ಮಂಜೂರಾತಿ ಕೋರಿರುತ್ತಾರೆ. ಮೇಲೆ (4)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಆರ್ಥಿಕ ಇಲಾಖೆಯು ಈ ಉದ್ದೇಶಕ್ಕಾಗಿ ರೂ.49.50ಲಕ್ಷಗಳನ್ನು ಹೆಚ್ಚುವರಿಯಾಗಿ ಬಿಡುಗಡೆ ಮಾಡಿರುತ್ತದೆ. ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪ್ರಸ್ತಾವನೆಯನ್ನು ಸರ್ಕಾರದ ಹಂತದಲ್ಲಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ನೀಡುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಇಡಿ:200:ಯೋಯೋಕ 2006, ಬೆಂಗಳೂರು, ದಿನಾಂಕ:21ನೇ ಅಕ್ಟೋಬರ್ 2006**
**[ಸ್ವೀಮರ:ಇಡಿ:94:(ಯುನಿಕ್) 2006, ದಿನಾಂಕ:21.10.2006**

2006-07ನೇ ಸಾಲಿಗೆ ಮೈಸೂರು ಜಿಲ್ಲೆ, ಕೆ.ಆರ್.ನಗರ ತಾಲ್ಲೂಕು ಸಾಲಿಗ್ರಾಮದಲ್ಲಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜನ್ನು ಪ್ರಾರಂಭಿಸಲು ಸರ್ಕಾರವು ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಅನುಮೋದನೆ ನೀಡಿರುತ್ತದೆ. ಈ ಕಾಲೇಜಿಗೆ ಈ ಕೆಳಗೆ ಸೂಚಿಸಿರುವಂತೆ ಬೋಧಕ ಮತ್ತು ಬೋಧಕೇತರರ ಒಟ್ಟು ಇಪ್ಪತ್ತೈದು ಹುದ್ದೆಗಳನ್ನು ಸೃಜಿಸಲು ಮತ್ತು ಅವುಗಳನ್ನು ನಿಯಮಾನುಸಾರ ಭರ್ತಿ ಮಾಡಲು ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಅನುಮತಿ ನೀಡಿದೆ.

**ಬೋಧಕ**

| | |
|---|---|
| ಪ್ರಾಂಶುಪಾಲರು | 1 |
| ಉಪನ್ಯಾಸಕರು | 12 |
| ದೈಹಿಕ ಶಿಕ್ಷಣ ಇನ್ ಸ್ಟ್ರಕ್ಟರ್ಸ್ | 1 |
| ಗ್ರಂಥಪಾಲಕರು | 1 |
| ಒಟ್ಟು | 15 |

**ಬೋಧಕೇತರ**

| | |
|---|---|
| ಸೂಪರಿಂಟೆಂಡೆಂಟ್ | 1 |
| ಪ್ರಥಮದರ್ಜೆ ಸಹಾಯಕರು | 1 |
| ಬೆರಳಚ್ಚುಗಾರರು | 1 |
| ಗ್ರಂಥಾಲಯ ಸಹಾಯಕರು | 1 |
| ಅಟೆಂಡರ್ | 3 |
| ಗ್ರೂಪ್ ಡಿ | 3 |
| ಒಟ್ಟು | 10 |

ಸದರಿ ಕಾಲೇಜಿಗೆ ಸಂಬಂಧಿಸಿದಂತೆ ಕೆಳಕಂಡಂತೆ ವೆಚ್ಚ ಮಾಡಲು ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಅನುಮೋದನೆ ನೀಡಲಾಗಿದೆ.

| | [ರೂ.ಲಕ್ಷಗಳಲ್ಲಿ] |
|---|---|
| 1. ವೇತನಗಳಿಗಾಗಿ | 6.00 |
| 2. ಕಛೇರಿ ವೆಚ್ಚಗಳಿಗಾಗಿ | 1.00 |
| 3. ಪೀಠೋಪಕರಣಗಳು ಹಾಗೂ ಉಪಕರಣಗಳ ಖರೀದಿಗಾಗಿ | 4.00 |
| 4. ಗ್ರಂಥಾಲಯ ಪುಸ್ತಕಗಳ ಖರೀದಿಗಾಗಿ | 1.50 |
| 5. ವಿಜ್ಞಾನ ಉಪಕರಣಗಳ ಖರೀದಿಗಾಗಿ | 2.00 |
| 6. ಕಟ್ಟಡಗಳ ನಿರ್ಮಾಣಕ್ಕಾಗಿ | 35.00 |
| ಒಟ್ಟು | **49.50** |

**[ರೂಪಾಯಿ ನಲವತ್ತೊಂಭತ್ತು ಲಕ್ಷ ಐವತ್ತು ಸಾವಿರಗಳು ಮಾತ್ರ]**

ಖರೀದಿಗಳಿಗೆ ಸಂಬಂಧಿಸಿದಂತೆ ಪ್ರಚಲಿತವಿರುವ ಎಲ್ಲಾ ಖರೀದಿ ನಿಯಮಗಳನ್ನು ಚಾಚೂ ತಪ್ಪದೆ ಕಟ್ಟು ನಿಟ್ಟಾಗಿ ಪಾಲಿಸಲು ಸೂಚಿಸಿದೆ.

2006–07ನೇ ಸಾಲಿಗೆ ಸದರಿ ಕಾರ್ಯಕ್ರಮಕ್ಕೆ ಮೊದಲು ಲೆಕ್ಕಶೀರ್ಷಿಕೆ:2202–03–103–2–01–059 ಇತರೆ ವೆಚ್ಚಗಳು ಯೋಜನೆಯಡಿ ಒದಗಿಸಿರುವ ಆಯವ್ಯಯದಲ್ಲಿ ವೆಚ್ಚವನ್ನು ಭರಿಸತಕ್ಕದ್ದು. ಇದಕ್ಕಾಗಿ ಹೆಚ್ಚುವರಿ ಅನುದಾನವನ್ನು ಆರ್ಥಿಕ ಇಲಾಖೆಯು ತನ್ನ ಆದೇಶ ಸಂಖ್ಯೆ ಎಫ್.ಡಿ:301:ಟಿ.ಆರ್.ಎಸ್ 2006: ದಿನಾಂಕ:18.10.2006ರಲ್ಲಿ ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ ಅವರ ಸಹಮತಿಯನ್ನು ಅ.ಟಿ.ಸಂಖ್ಯೆ:ಆಇ:1028: ವೆಚ್ಚ–8/ 2006 ದಿ.19.10.2006ರಲ್ಲಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಹಾಗೂ ಅವರ ಹೆಸರಿನಲ್ಲಿ
**ಕೆ.ಶ್ರೀಕಂಠೇಶ್ವರ**
ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ ಸರ್ಕಾರದ ಸಹ ಕಾರ್ಯದರ್ಶಿ
ಶಿಕ್ಷಣ ಇಲಾಖೆ(ಯೋಜನೆ).

ಪಿ.ಆರ್. 1559.

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಕೆ.ವೈ.ಜನ್ನೂರು, ಮಾಜಿ ಪಿಎಸ್‌ಐ ರವರು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಅರ್ಜಿಯ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಆದೇಶ ಸಂಖ್ಯೆ:ಸಿಬಿ/ 8/2/2005-06, ದಿನಾಂಕ:17-04-2006.
2. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:19-05-2006
3. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಸಿಬಿ/8/ 2/2005-06, ದಿನಾಂಕ:28-06-2006.
4. ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:PSC/102/CNS/06, ದಿನಾಂಕ: 18.10.2006.

**ಪ್ರಸ್ತಾವನೆ:**

ಶ್ರೀ ಕೆ.ವೈ.ಜನ್ನೂರು, ಮಾಜಿ ಪಿಎಸ್‌ಐ (ಕಾನೂನು ಮತ್ತು ಸುವ್ಯವಸ್ಥೆ) ಹರಿಹರ ನಗರ ಪೊಲೀಸ್ ಠಾಣೆ, ಬೆಳಗಾವಿ ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6 ಮತ್ತು 8ರಡಿ ಜಂಟಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"1. ನೀವು ದಿನಾಂಕ:16-10-2002 ರಿಂದ 18-07-2003 ರವರೆಗೆ ಹರಿಹರ ನಗರ ಠಾಣೆಯಲ್ಲಿ ಪಿಎಸ್ಐ ಕಾನೂನು ಸುವ್ಯವಸ್ಥೆ ಆಗಿ ಕರ್ತವ್ಯನಿರ್ವಹಿಸಿದ್ದು, ದಿನಾಂಕ:18-10-2002 ರಿಂದ 03-06-2003ರ ಅವಧಿಯಲ್ಲಿ ಮೋಟಾರು ವೆಹಿಕಲ್ಸ್ ಆಕ್ಟ್ ಅಡಿಯಲ್ಲಿ ಸ್ಥಳದಲ್ಲಿಯೇ ದಂಡ ವಸೂಲಿ ಮಾಡಿದ ಹಣ ಒಟ್ಟು ಹಣ ರೂ.32,100/- ಬಗ್ಗೆ ಒಟ್ಟು 2 ನಕಲಿ ಚಲನ್‌ಗಳನ್ನು ಸೃಷ್ಟಿಸಿ ಸರ್ಕಾರಕ್ಕೆ ಜಮಾ ಮಾಡಿದ ಠಾಣಾ ಬರಹಗಾರರಾದ ಶ್ರೀ ರಾಮಚಂದ್ರ ಸಿಪಿಸಿ-216, ಇವರ ಸಹಯೋಗದಿಂದ ದುರುಪಯೋಗಪಡಿಸಿಕೊಂಡು ಕರ್ತವ್ಯದಲ್ಲಿ ತೀವ್ರ ತರಹದ ದುರ್ನಡತೆಯನ್ನು ಪ್ರದರ್ಶಿಸಿ, ಅಧಿಕಾರ ದುರುಪಯೋಗಪಡಿಸಿ ಕೊಂಡಿರುತ್ತೀರಿ."

"2. ದಿನಾಂಕ:25-10-2002 ರಿಂದ 02-01-2003ರ ಅವಧಿಯಲ್ಲಿ ಹರಿಹರ ನಗರ ಠಾಣೆಯಲ್ಲಿ ಮೋಟಾರು ವೆಹಿಕಲ್ಸ್ ಕಾಯ್ದೆ ಅಡಿಯಲ್ಲಿ ಸ್ಥಳದಲ್ಲಿ ದಂಡ ವಸೂಲಿ ಮಾಡಿದ ರಸೀದಿಗಳಲ್ಲಿ ಹೆಚ್ಚಿನ ಮೊತ್ತ ವಸೂಲಿ ಮಾಡಿ, ಪುಸ್ತಕದಲ್ಲಿ ರಸೀದಿ ಸಂಖ್ಯೆ:192417, 545023ರಲ್ಲಿ ಕ್ರಮವಾಗಿ ರೂ.200/- ಬದಲಾಗಿ ರೂ.100/- ಎಂದು ನಮೂದಿಸಿ, ಒಟ್ಟು ರೂ.200/-ಗಳನ್ನು ಠಾಣಾ ಬರಹಗಾರ ಶ್ರೀ ರಾಮಚಂದ್ರ ಸಿಪಿಸಿ-216 ಇವರ ಸಹಯೋಗದೊಂದಿಗೆ ದುರುಪಯೋಗಪಡಿಸಿಕೊಂಡು ಕರ್ತವ್ಯದಲ್ಲಿ ತೀವ್ರ ತರಹದ ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಒಂದನೇ ಆರೋಪ ಸಾಬೀತಾಗಿದೆ ಎಂದೂ ಎರಡನೇ ಆರೋಪದ ಬಗ್ಗೆ ಯಾವುದೇ ಸಾಕ್ಷ್ಯಾಧಾರಗಳು ಇಲ್ಲವೆಂದೂ ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:17-04-2006ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಿ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಈ ಮೇಲ್ಮನವಿ ಅರ್ಜಿಗಳಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಎಂ.ವಿ. ಆಕ್ಟ್ ಅಡಿಯಲ್ಲಿ ದಂಡ ವಸೂಲಿ ಮಾಡಿದ ಒಟ್ಟು ಹಣ ರೂ.32,100/-ಗಳಲ್ಲಿ, ಇಲಾಖಾ ವಿಚಾರಣೆಯಲ್ಲಿ ಕೇವಲ ರೂ.700/- ಗಳನ್ನು ದುರುಪಯೋಗಪಡಿಸಿಕೊಂಡಿರುವುದಾಗಿ ಸಾಬೀತಾಗಿರುತ್ತದೆ. ಶ್ರೀ ರಾಮಚಂದ್ರ ಸಿಪಿಸಿ-216 ಇವರಿಂದ ದುರುಪಯೋಗ ಪಡಿಸಿಕೊಂಡಿರುವ ಹಣವನ್ನು ವಸೂಲಿ ಮಾಡಿ ಅದನ್ನು ಸರ್ಕಾರಕ್ಕೆ ಜಮಾ ಮಾಡಲು ಅರ್ಜಿದಾರರು ಪೊಲೀಸ್ ಅಧೀಕ್ಷಕರು, ದಾವಣಗೆರೆ ಇವರನ್ನು ಕೋರಿರುವುದೂ, ಸಿಪಿಸಿ-216 ರಾಮಚಂದ್ರ ಇವರು ಹಣವನ್ನು ದುರುಪಯೋಗಪಡಿಸಿಕೊಂಡಿರುವುದಾಗಿ ನಿವೇದಿಸಿಕೊಂಡಿರುವುದೂ ಕಂಡುಬರುತ್ತದೆ. ಎರಡನೇ ಆರೋಪವೆಂದರೆ ರಸೀದಿ ಪುಸ್ತಕದಲ್ಲಿ ಕಡಿಮೆ ಮೊತ್ತದ ಹಣ ದಾಖಲಿಸಿ, ಹೆಚ್ಚು ಮೊತ್ತದ ಹಣ ಪಡೆದಿರುವ ಬಗ್ಗೆ ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿರುವುದಿಲ್ಲ. ಅರ್ಜಿದಾರರು ಒಬ್ಬ ಜವಾಬ್ದಾರಿಯುತ ಪೊಲೀಸ್ ಅಧಿಕಾರಿಯಾಗಿದ್ದು, ತಡವಾಗಿಯಾದರೂ ಸರ್ಕಾರಕ್ಕೆ ಸೇರಬೇಕಾದ ಹಣವನ್ನು ಜಮಾ ಮಾಡಿರುವುದನ್ನು ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ರವರು ಸಹ ಒಪ್ಪಿರುತ್ತಾರೆ.

ಅರ್ಜಿದಾರರ ಸೇವಾ ಅವಧಿಯನ್ನೂ, ಕುಟುಂಬ ಪರಿಸ್ಥಿತಿಯನ್ನೂ ಪರಿಗಣಿಸಿ, ಶಿಸ್ತು ಪ್ರಾಧಿಕಾರಿ ವಿಧಿಸಿರುವ ಕಠಿಣ ದಂಡನೆಯನ್ನು ರದ್ದುಪಡಿಸಿ, ಈ ಕೆಳಕಂಡಂತೆ ಆದೇಶಿಸಲು ಸರ್ಕಾರ ಉದ್ದೇಶಿಸಿದೆ.

1. ಅರ್ಜಿದಾರರನ್ನು ಸೇವೆಗೆ ಪುನರ್ ನೇಮಕ ಮಾಡುವುದು;
2. ಅಮಾನತ್ತಿನ ಅವಧಿಯನ್ನು ಕರ್ತವ್ಯವೆಂದು ಪರಿಗಣಿಸುವುದು;
3. ಸೇವೆಯಿಂದ ವಜಾಗೊಂಡು ಸೇವೆಗೆ ಪುನರ್ ನೇಮಕಗೊಂಡು ಕರ್ತವ್ಯಕ್ಕೆ ಹಾಜರಾಗುವ ವರೆಗಿನ ಅವಧಿಯನ್ನು ಅವರ ಹಕ್ಕಿನಲ್ಲಿರುವ ರಜೆ ಎಂದು ಪರಿಗಣಿಸುವುದು.

ಈ ಸಂಬಂಧ ಕರ್ನಾಟಕ ಲೋಕ ಸೇವಾ ಆಯೋಗದ ಅಭಿಪ್ರಾಯ ಕೋರಲಾಗಿತ್ತು.

ಆಯೋಗವು ದಿನಾಂಕ:18-10-2006ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ತನ್ನ ಸಹಮತಿ ನೀಡಿದೆ. ಅದರಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 323 ಪೊಸಿಅ 2005 ಬೆಂಗಳೂರು, ದಿನಾಂಕ:28ನೇ ಅಕ್ಟೋಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ದಿನಾಂಕ:17-04-2006ರ ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಆದೇಶವನ್ನು ಭಾಗಶ: ಮಾರ್ಪಡಿಸಿ, ಶ್ರೀ ಕೆ.ವೈ.ಜನ್ನೂರು, ಮಾಜಿ ಪಿಎಸ್ಐ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:19-05-2006ರ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ,

1) ಅರ್ಜಿದಾರರನ್ನು ಸೇವೆಗೆ ಪುನರ್ ನೇಮಕ ಮಾಡಲಾಗಿದೆ.

2) ಅಮಾನತ್ತಿನ ಅವಧಿಯನ್ನು ಕರ್ತವ್ಯವೆಂದು ಪರಿಗಣಿಸಿದೆ.

3) ಸೇವೆಯಿಂದ ವಜಾಗೊಂಡು ಸೇವೆಗೆ ಪುನರ್ ನೇಮಕಗೊಂಡು ಕರ್ತವ್ಯಕ್ಕೆ ಹಾಜರಾಗುವವರೆಗಿನ ಅವಧಿಯನ್ನು ಅವರ ಹಕ್ಕಿನಲ್ಲಿರುವ ರಜೆ ಎಂದು ಪರಿಗಣಿಸುವುದು.

ಈ ಆದೇಶವು ಶಿಸ್ತು ಪ್ರಾಧಿಕಾರಿ ಹೊರಡಿಸಿದ ಆದೇಶ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ದಿನಾಂಕ:18-10-2006ರ ಪತ್ರದಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 1578

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಹೆಚ್. ವೆಂಕಟೇಶ್, ಸಿಪಿಸಿ-169, ಕೋಲಾರ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಅರ್ಜಿ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ತುಮಕೂರು ಇವರ ಆದೇಶ ಸಂಖ್ಯೆ:ಪನ್ಸಿ/ಡಿಇ26/2001, ಓಬಿ ಸಂಖ್ಯೆ:42/ 2003-04, ದಿನಾಂಕ:30-04-2003.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಕೇಂದ್ರ ವಲಯ, ಬೆಂಗಳೂರು ಇವರ ಆದೇಶ ಸಂಖ್ಯೆ:ಅಪೀಲು/06/03-04, ಓಬಿ ಸಂಖ್ಯೆ:33/2003-04, ದಿನಾಂಕ:30-06-2003.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:09-10--2003.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/86/2003-04, ದಿನಾಂಕ:05-03-2004.
5. ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:PSC/85/ CNS/2006, ದಿನಾಂಕ:02-09-2006.

**ಪ್ರಸ್ತಾವನೆ:**

ಶ್ರೀ ಹೆಚ್.ವೆಂಕಟೇಶ್, ಸಿಪಿಸಿ-697 (169) ಕುಣಿಗಲ್ ಪೊಲೀಸ್ ಠಾಣೆ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ನಿಮ್ಮನ್ನು ದಿನಾಂಕ:29-12-2001ರಂದು ರಾತ್ರಿ ಕರ್ತವ್ಯಕ್ಕೆ ನೇಮಕ ಮಾಡಿದ್ದು, ರಾತ್ರಿ ಕರ್ತವ್ಯಕ್ಕೆ ಬರಬೇಕಾಗಿದ್ದು, ಬರದೇ ಗೈರುಹಾಜರಾಗಿ ಮಧ್ಯಪಾನ ಸೇವಿಸಿ ಈ ಬಗ್ಗೆ ಪ್ರಶ್ನಿಸಿದ ಪಿ.ಎಸ್.ಐ. ಬಾಳೇಗೌಡ ರವರಿಗೆ ಅವಾಚ್ಯ ಶಬ್ಧಗಳಿಂದ ಬೈದು ಅನುಮತಿ ಪಡೆಯದೇ ಪಿ.ಎಸ್.ಐ. ಕ್ರೈಂ ರವರ ಸೈಕಲ್ ಮೋಟಾರನ್ನು ತೆಗೆದುಕೊಂಡು ಹೋಗಿ ಕರ್ತವ್ಯದಲ್ಲಿ ಅತೀವ ದುರ್ನಡತೆ ಹಾಗೂ ಕರ್ತವ್ಯ ನಿರ್ಲಕ್ಷತೆ ತೋರಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿಲ್ಲ ಎಂದು ಸಲ್ಲಿಸಿದ ವರದಿಯನ್ನು ಒಪ್ಪದ ಶಿಸ್ತು ಪ್ರಾಧಿಕಾರಿ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದೆ, ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ತುಮಕೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:30-04-2003ರ ಆದೇಶದಲ್ಲಿ ಅರ್ಜಿದಾರರನ್ನು ಕೆಲಸದಿಂದ ವಜಾ ಮಾಡಿ, ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೇಂದ್ರ ವಲಯ, ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲದಿದ್ದರೂ, ಮಾನವೀಯತೆ ದೃಷ್ಟಿಯಿಂದ ಶಿಸ್ತು ಪ್ರಾಧಿಕಾರಿ ಆದೇಶವನ್ನು ಮಾರ್ಪಡಿಸಿ, ಅರ್ಜಿದಾರರನ್ನು ಸೇವೆಗೆ ಪುನರ್ ನೇಮಿಸಿ, ಪಿಸಿ ಹುದ್ದೆಯ ಮೂಲ ವೇತನದಿಂದ ಸೇವೆಯನ್ನು ಪ್ರಾರಂಭಿಸಲು, ಸೇವೆಯಿಂದ ಹೊರಗುಳಿದ ಅವಧಿಯನ್ನು ಕರ್ತವ್ಯದ ಮೇಲಿಲ್ಲದ ಅವಧಿ ಎಂದೂ ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:30-06-2003ರ ಆದೇಶದಲ್ಲಿ ಮೇಲ್ಮನವಿಯನ್ನು ಪುರಸ್ಕರಿಸಿ ಆದೇಶಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಶಿಸ್ತು ಪ್ರಾಧಿಕಾರವು ವಿಧಿಸಿದ ದಂಡನೆಯನ್ನು ಮೇಲ್ಮನವಿ ಪ್ರಾಧಿಕಾರವು ರದ್ದುಪಡಿಸಿ ಸೇವೆಯಲ್ಲಿ ಪುನರ್ ಸ್ಥಾಪಿಸಿದ್ದಾರೆ ಅವರನ್ನು ಪಿಸಿ

ಹುದ್ದೆಯ ಮೂಲ ವೇತನದಿಂದ ಸೇವೆಯನ್ನು ಪ್ರಾರಂಭಿಸಲು ಆದೇಶಿಸಿರುತ್ತಾರೆ. ಆದ್ದರಿಂದ ಅವರು ಎಸಗಿರುವ ದುರ್ನಡತೆಗೆ ತಕ್ಕ ದಂಡನೆಯನ್ನೇ ವಿಧಿಸಿದ್ದಾರೆ. ಆದ್ದರಿಂದ ಮೇಲ್ಮನವಿ ಪ್ರಾಧಿಕಾರದ ಆದೇಶದಲ್ಲಿ ಸರ್ಕಾರ ಹಸ್ತಕ್ಷೇಪ ಮಾಡುವುದು ಉಚಿತವೆನಿಸಲಾರದು. ಆದ್ದರಿಂದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಬಹುದಾಗಿದ್ದರೂ, ಅವರು ವಿಧಿಸಿರುವ ಅಂದರೆ ಸೇವೆಗೆ ಪುನರ್‌ಸ್ಥಾಪಿಸಿ ಪಿಸಿ ಹುದ್ದೆಯ ಮೂಲ ವೇತನದಿಂದ ಹೊಸದಾಗಿ ವಾರ್ಷಿಕ ವೇತನ ಬಡ್ತಿ ಗಳಿಸಲು ಆದೇಶ ಮಾಡಿದ್ದು, ಈ ಆದೇಶ ಕೆಸಿಎಸ್‌ಆರ್ ನ ನಿಯಮ 59 ರ ಪ್ರಕಾರ ಮೂಲ ವೇತನಕ್ಕೆ ಇಳಿಸಿದಾಗ ಅವಧಿ ನಿಗದಿಪಡಿಸದೇ ಇರುವ ಕಾರಣ, ಮೇಲ್ಮನವಿ ಪ್ರಾಧಿಕಾರದ ಆದೇಶ ದಿನಾಂಕ:30-06-2003 ಅನ್ನು ಮಾರ್ಪಡಿಸಿ, ಮೂಲ ವೇತನಕ್ಕೆ 5 ವರ್ಷಗಳ ಕಾಲ ಇಳಿಸಿ, ಆ ಅವಧಿಯಲ್ಲಿ ಯಾವುದೇ ವಾರ್ಷಿಕ ವೇತನ ಬಡ್ತಿ ಗಳಿಸದೆ 5 ವರ್ಷಗಳ ನಂತರ ಶಿಸ್ತು ಪ್ರಾಧಿಕಾರಿಯ ದಂಡನಾದೇಶದ ಹಿಂದಿನ ದಿನಾಂಕದಂದು ಪಡೆಯುತ್ತಿದ್ದ ವೇತನಕ್ಕೆ ವೇತನ ನಿಗದಿ ಪಡಿಸಿ, ಅಲ್ಲಿಂದ ಹೊಸದಾಗಿ ವಾರ್ಷಿಕ ವೇತನ ಬಡ್ತಿ ಪಡೆಯುವಂತೆ ಮಾಡಲು ಸರ್ಕಾರ ಉದ್ದೇಶಿಸಿ, ಕರ್ನಾಟಕ ಲೋಕ ಸೇವಾ ಆಯೋಗದ ಅಭಿಪ್ರಾಯ ಕೋರಲಾಗಿತ್ತು. ಕರ್ನಾಟಕ ಲೋಕ ಸೇವಾ ಆಯೋಗವು ದಿನಾಂಕ:02-09-2006 ರ ತನ್ನ ಪತ್ರದಲ್ಲಿ ಮೇಲ್ಮನವಿ ಪ್ರಾಧಿಕಾರಿಯು ವಿಧಿಸಿರುವ ದಂಡನೆಯನ್ನು ಭಾಗಶ: ಮಾರ್ಪಡಿಸಿ, ಪರಿಷ್ಕೃತ ದಂಡನೆ ವಿಧಿಸುವ ಪ್ರಸ್ತಾವನೆಗೆ ತನ್ನ ಸಹಮತಿ ನೀಡಿದೆ. ಅದರಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 184 ಪೊಸಿಅ 2005 ಬೆಂಗಳೂರು ದಿನಾಂಕ:25ನೇ ಅಕ್ಟೋಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ದಿನಾಂಕ:30-06-2003ರ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೇಂದ್ರ ವಲಯ, ಬೆಂಗಳೂರು ಇವರ ಆದೇಶವನ್ನು ಭಾಗಶ: ಮಾರ್ಪಡಿಸಿ, ಶ್ರೀ ಹೆಚ್.ವೆಂಕಟೇಶ್, ಸಿಪಿಸಿ-169 ಕೋಲಾರ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:09-10-2003ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ, ಅರ್ಜಿದಾರರ ವೇತನವನ್ನು ಅವರ ಹುದ್ದೆಯ (ಪಿಸಿ) ಮೂಲ ವೇತನಕ್ಕೆ ಐದು (05) ವರ್ಷಗಳ ಕಾಲ ಇಳಿಸಿ, ಈ ಅವಧಿಯಲ್ಲಿ ಯಾವುದೇ ವಾರ್ಷಿಕ ವೇತನ ಬಡ್ತಿ ಗಳಿಸದೇ ದಂಡನಾ ಅವಧಿಯ ಐದು ವರ್ಷಗಳ ನಂತರ ಶಿಸ್ತು ಪ್ರಾಧಿಕಾರಿಯ ದಂಡನಾದೇಶದ ಹಿಂದಿನ ದಿನಾಂಕದಂದು ಪಡೆಯುತ್ತಿದ್ದ ವೇತನಕ್ಕೆ ವೇತನವನ್ನು ನಿಗದಿಪಡಿಸಿ, ಅಲ್ಲಿಂದ ವಾರ್ಷಿಕ ವೇತನ ಬಡ್ತಿ ಗಳಿಸುವಂತೆ ಆದೇಶಿಸಿದೆ. ಉಳಿದೆಲ್ಲಾ ನಿಬಂಧನೆಗಳೂ ಮೇಲ್ಮನವಿ ಪ್ರಾಧಿಕಾರಿಯ ಆದೇಶದಲ್ಲಿರುವಂತೆಯೇ ಮುಂದುವರೆಯುತ್ತವೆ. ಈ ಆದೇಶವು ಶಿಸ್ತು ಪ್ರಾಧಿಕಾರಿಯ ಆದೇಶ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:PSC/85/CNS/2006, ದಿನಾಂಕ:02-09-2006ರ ಪತ್ರದಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 1550

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಕೆ.ಆರ್.ಸುರೆಂದ್ರರಾವ್, ಡಿಎಸ್‌ಪಿ, ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಅರ್ಜಿಯ ಬಗ್ಗೆ ಆದೇಶ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಆದೇಶ ಸಂಖ್ಯೆ:ಅಪೀಲು /7/31/2004-05, ದಿನಾಂಕ:20-01-2005.
2. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:09-05-2006
3. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/ 7/31/2004-05, ದಿನಾಂಕ:13-06-2006.

**ಪ್ರಸ್ತಾವನೆ:**

ಶ್ರೀ ಕೆ.ಆರ್.ಸುರೇಂದ್ರರಾವ್, ಡಿವೈ.ಎಸ್.ಪಿ., ಬೆಂಗಳೂರು ಉಪ ವಿಭಾಗ, ಬೆಂಗಳೂರು ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 7ರಡಿ ದೋಷಾರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷಾರೋಪಣೆ:**

''ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೇಂದ್ರ ವಲಯ, ಬೆಂಗಳೂರು ರವರು ಶ್ರೀ ಎನ್.ಎ.ಖಲಂದರ್ ಖಾನ್, ಪಿಎಸ್‌ಐ, ವೈಟ್‌ಫೀಲ್ಡ್ ಪೊಲೀಸ್ ಠಾಣೆ, ರವರನ್ನು ಅಮಾನತ್ತಿನಲ್ಲಿಟ್ಟ ಆದೇಶ ಸಂಖ್ಯೆ:ಪಸ್ನಿ/ಡಿಇ/12/04-05, ದಿನಾಂಕ:18-08-2004ರನ್ನು ಸದರಿ ಪಿಎಸ್‌ಐ ರವರಿಗೆ ಜಾರಿಗೊಳಿಸಲು ಸೂಪರಿಂಟೆಂಡೆಂಟ್ ಆಫ್ ಪೊಲೀಸ್, ಬೆಂಗಳೂರು ಜಿಲ್ಲೆ ರವರು ದಿನಾಂಕ:18-08-2004ರಂದು ನಿಮಗೆ ಕಳುಹಿಸಿದ್ದು, ಅದನ್ನು ಅವರಿಗೆ ಜಾರಿಗೊಳಿಸಲು ನೀವು ವಿಫಲರಾಗಿ, ಅನಧಿಕೃತವಾಗಿ

ಆದೇಶದ ಪ್ರತಿ ಅವರಿಗೆ ಲಭ್ಯವಾಗುವಂತೆ ಮಾಡಿ, ಅವರು ಕೆಎಟಿಗೆ ಅರ್ಜಿ ಸಲ್ಲಿಸಿ, ತಡೆಯಾಜ್ಞೆ ತರಲು ಕಾರಣರಾಗಿ, ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತನ ಮತ್ತು ಬೇಜವಾಬ್ದಾರಿತನ ತೋರಿಸಿರುತ್ತೀರಿ.''

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:20-01-2005ರ ಆದೇಶದಲ್ಲಿ ಅರ್ಜಿದಾರರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆ ಆಗದಂತೆ ಒಂದು ವರ್ಷ ಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಈ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರಿಗೆ ತಮ್ಮ ಸಮಜಾಯಿಷಿ ಕೋರಿ ನೋಟೀಸು ನೀಡಿದಾಗ, ನೇರವಾಗಿ ಉತ್ತರವನ್ನು ನೋಟೀಸು ನೀಡಿದವರಿಗೆ ಕಳುಹಿಸಬೇಕಾಗಿದ್ದು ಅದನ್ನು ಸಮುಚಿತ ಮಾರ್ಗದಲ್ಲಿ ಕಳುಹಿಸುವ ಅಗತ್ಯವಿರಲಿಲ್ಲ. ತಾವು ಪಿಎಸ್ಐ ರವರಿಗೆ ಆದೇಶವನ್ನು ಜಾರಿಗೊಳಿಸಲು ಸರ್ವ ಪ್ರಯತ್ನಗಳನ್ನೂ ಮಾಡಿರುವುದಾಗಿ ತಿಳಿಸಿದ್ದು, ಯಾವ ರೀತಿ ಪ್ರಯತ್ನ ಮಾಡಿದರೆಂಬ ಬಗ್ಗೆ ಯಾವುದೇ ಆಧಾರವಿರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯನಿರ್ವಹಿಸುತ್ತಿದ್ದು, ನಿರ್ಲಕ್ಷತೆ, ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ್ದು, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ಲಘು ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 308 ಪೊಸಿಅ 2006 ಬೆಂಗಳೂರು ದಿನಾಂಕ:26ನೇ ಅಕ್ಟೋಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕೆ.ಆರ್.ಸುರೇಂದ್ರರಾವ್, ಡಿಎಸ್‌ಪಿ, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:09-05-2006ರ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 1551 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಫ್.ಎ. ಟ್ರಾಸ್ಗರ್, ಡಿವೈ.ಎಸ್.ಪಿ., ರೈಲ್ವೆ ಉಪ ವಿಭಾಗ ಹುಬ್ಬಳ್ಳಿ ರವರು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಆದೇಶ ಸಂಖ್ಯೆ:ಸಿಬಿ/5/ 34/2005-06, ದಿನಾಂಕ:28-01-2006.
2. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:18-04-2006
3. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಸಿಬಿ/5/345/2005-06, ದಿನಾಂಕ:24-05-2006.

**ಪ್ರಸ್ತಾವನೆ:**

ಶ್ರೀ ಎಫ್.ಎ.ಟ್ರಾಸ್ಗರ್, ಡಿವೈ.ಎಸ್.ಪಿ., ರೈಲ್ವೆ ಉಪ ವಿಭಾಗ, ಹುಬ್ಬಳ್ಳಿ (ಈ ಹಿಂದೆ ಸಿಪಿಐ ಆಗಿ ಮಾರ್ಕೆಟ್ ಪೊಲೀಸ್ ಠಾಣೆ ಬೆಳಗಾಂ ಜಿಲ್ಲೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ) ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 7 ರಡಿ ದೋಷರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷರೋಪಣೆ:**

''ನೀವು ಪೊಲೀಸ್ ಇನ್ಸ್‌ಪೆಕ್ಟರ್ ಆಗಿ ಹಿಂದೆ ಮಾರ್ಕೆಟ್ ಪೊಲೀಸ್ ಠಾಣೆ, ಬೆಳಗಾವಿ ಇಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, ಅಪರಾಧ ಸಂಖ್ಯೆ:251/2000ರ ಪ್ರಕರಣದಲ್ಲಿ ತನಿಖಾಧಿಕಾರಿಯಾಗಿದ್ದು, ಸದರಿ ಪ್ರಕರಣದಲ್ಲಿ ನ್ಯಾಯಾಲಯದಿಂದ ಸಾಕ್ಷಿ ನೀಡಲು 4 ಸಲ ಸಮನ್ಸ್ ಮತ್ತು ಒಂದು ಸಲ ವಾರೆಂಟ್ ಜಾರಿಯಾಗಿದ್ದರೂ, ಕೂಡ, ನ್ಯಾಯಾಲಯಕ್ಕೆ ಹಾಜರಾಗಿ ಸಾಕ್ಷಿ ನುಡಿಯಲು ವಿಫಲರಾಗಿ ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತನ ಮತ್ತು ಬೇಜವಾಬ್ದಾರಿತನವನ್ನು ತೋರಿಸಿರುತ್ತೀರಿ.''

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 28-01-2006ರ ಆದೇಶದಲ್ಲಿ ಅರ್ಜಿದಾರರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆ ಆಗದಂತೆ ಆರು ತಿಂಗಳ ಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಈ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳನ್ನು ಪರಿಶೀಲಿಸಲಾಗಿದೆ. ನ್ಯಾಯಾಲಯಕ್ಕೆ ಹಾಜರಾಗಿ ಸಾಕ್ಷಿ ನುಡಿಯಲು ನಾಲ್ಕು ಬಾರಿ ಸಮನ್ಸ್ ಬಂದಿದ್ದು ಇದನ್ನು ಅರ್ಜಿದಾರರಿಗೆ ಜಾರಿ ಮಾಡಿರುವುದು ದಾಖಲೆಗಳಿಂದ ಕಂಡುಬರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ್ದು, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ಲಘು ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 383 ಪೊಸಿಅ 2006 ಬೆಂಗಳೂರು, ದಿನಾಂಕ:26ನೇ ಅಕ್ಟೋಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಫ್.ಎ.ಟ್ರಾಸ್ಗರ್, ಡಿವೈ.ಎಸ್.ಪಿ., ರೈಲ್ವೆ ಉಪ ವಿಭಾಗ, ಹುಬ್ಬಳ್ಳಿ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:18-04-2006ರ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 1552

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ವೈಜನಾಥ್ ಸಿಂಧೆ, ಸಿಹೆಚ್‌ಸಿ-562, ಬೀದರ್ ಜಿಲ್ಲೆ, ರವರ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬೀದರ್ ಇವರ ಆದೇಶ ಸಂಖ್ಯೆ:ಸಿಬ್ಬಂದಿ/4/ಲಶಿ/101/04/ಆಪು ಸಂಖ್ಯೆ: 405/2005, ದಿನಾಂಕ:20-02-2005.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಈಶಾನ್ಯ ವಲಯ, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ:ಅಪೀಲು/41/ಈವ/2002, ಆಪು ಸಂಖ್ಯೆ:340/ಈವ/2005/3572, ದಿನಾಂಕ:12-08-2005.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:16-11-2005
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/150/2005, ದಿನಾಂಕ:18-03-2006.

**ಪ್ರಸ್ತಾವನೆ:**

ಶ್ರೀ ವೈಜನಾಥ ಸಿಂಧೆ, ಸಿಹೆಚ್‌ಸಿ-562 ಚಿಟಗುಪ್ಪಾ ಪೊಲೀಸ್ ಠಾಣೆ, (ಹಾಲಿ ಡಿಸಿಆರ್‌ಬಿ ಘಟಕ ಬೀದರ್) ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 7ರಡಿ ದೋಷಾರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷಾರೋಪಣೆ:**

''ದಿನಾಂಕ:06-07-2004ರಂದು 14-00 ಘಂಟೆಗೆ ಪಿಎಸ್‌ಐ ಚಿಟ್ಟಗುಪ್ಪ ರವರು ಸದರಿ ಠಾಣೆಯ ಅಪರಾಧ ಸಂ.11-14 ಕಲಂ 379 IPC ಪ್ರಕರಣದಲ್ಲಿ ಆರೋಪಿ ಶೋಧನೆ ಕರ್ತವ್ಯಕ್ಕೆ ನೇಮಕ ಮಾಡಿದ್ದು, ನೀವು ಈ ಕರ್ತವ್ಯಕ್ಕೆ ಹೋಗದೇ, ಸದರಿ ದಿನ 21-00 ಘಂಟೆಯ ನಂತರ ನಿಮ್ಮ ಪೊಲೀಸ್ ವಸತಿ ಗೃಹದಲ್ಲಿ ನಿಮ್ಮ, ಕುಟುಂಬದ ಸದಸ್ಯರು ಇರದಿದ್ದರೂ, ಕೂಡ, ಪರಗ್ರಾಮದವಳಾದ ಶ್ರೀಮತಿ ಕಮಲಮ್ಮ ಉರ್ಫ್ ಮಲ್ಲಮ್ಮ ಗಂಡ ಶಾಮರಾವ್ ಬಾಜೋಳಗೆ ಸಾ:ತಾಳಮಡಗಿ ಇವಳನ್ನು ಕರೆದುಕೊಂಡು ಬಂದು, ಅಕ್ಕಪಕ್ಕದ ವಸತಿ ಗೃಹ ದವರಿಗೆ ಅನುಮಾನ ಬರುವ ರೀತಿಯಲ್ಲಿ ಉಳಿಸಿಕೊಂಡು, ಖಂಡನೀಯ ದುರ್ನಡತೆ ಎಸಗಿರುವಿರಿ, ಹಾಗೂ ನಿಮ್ಮ ಅಮಾನತ್ತಿನ ಅವಧಿ ಅಮಾನತ್ತೆಂದೇ ಏಕೆ ಪರಿಗಣಿಸಬಾರದು ಎಂಬ ಬಗ್ಗೆ ವಿವರಣೆ ಸಲ್ಲಿಸಬೇಕು.''

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬೀದರ್ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:20-02-2005ರ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಮುಂಬಡ್ತಿಯನ್ನು ಭವಿಷ್ಯದ ವೇತನ ಮುಂಬಡ್ತಿಗಳಿಗೆ ಪರಿಣಾಮ ಬೀರದಂತೆ ಆರು (6) ತಿಂಗಳ ಅವಧಿಗೆ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಈಶಾನ್ಯ ವಲಯ, ಗುಲ್ಬರ್ಗಾ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:12-08-2005ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಒಬ್ಬ ಜವಾಬ್ದಾರಿಯುತ ಪೊಲೀಸ್ ಅಧಿಕಾರಿಯಾಗಿದ್ದು, ತಮ್ಮ ಕುಟುಂಬ ಸದಸ್ಯರ್‍ಯಾರೂ ಮನೆಯಲ್ಲಿ ಇಲ್ಲದಿರುವಾಗ, ಒಬ್ಬ ಹೆಂಗಸನ್ನು ವಸತಿ ಗೃಹದಲ್ಲಿರಿಸಿಕೊಂಡಿರುವುದು ಸಂಶಯಕ್ಕೆಡೆ ಮಾಡಿಕೊಟ್ಟಿದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ್ದು ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ಲಘು ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 241 ಪೊಸಿಅ 2006 ಬೆಂಗಳೂರು, ದಿನಾಂಕ:20ನೇ ಸೆಪ್ಟೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ವೈಜನಾಥ ಸಿಂಧೆ, ಸಿಹೆಚ್‌ಸಿ-562, ಬೀದರ್ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:16-11-2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 1445

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಗೋಪಾಲಯ್ಯಶೆಟ್ಟಿ, ಎಎಸ್‌ಐ, ಕೋಲಾರ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಕೋಲಾರ ಜಿಲ್ಲೆ, ಇವರ ಆದೇಶ ಸಂಖ್ಯೆ:ಪನ್ಸಿ/106/2002-03 ಓಬಿ ಸಂಖ್ಯೆ:41/2003-04, ದಿನಾಂಕ:29-05-2003.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೇಂದ್ರ ವಲಯ, ಬೆಂಗಳೂರು, ಇವರ ಆದೇಶ ಸಂಖ್ಯೆ:ಅಪೀಲು/22/2003-04, ಓಬಿ ಸಂಖ್ಯೆ:89/03-04, ದಿನಾಂಕ:15-10-2003.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:07-11-2003
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/93/2003-04, ದಿನಾಂಕ:05-03-2004.

**ಪ್ರಸ್ತಾವನೆ:**

ಶ್ರೀ ಗೋಪಾಲಯ್ಯಶೆಟ್ಟಿ, ಎಎಸ್‌ಐ ಕೋಲಾರ ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 7ರಡಿ ದೋಷರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷರೋಪಣೆ:**

"ದಿನಾಂಕ:12-01-2003ರಂದು ಕೊಳಗಂಜನಹಳ್ಳಿ ಹಾಗೂ ಎಸ್.ಎನ್.ಆರ್. ಆಸ್ಪತ್ರೆಗೆ ಭೇಟಿ ಮಾಡದೇ ಮೇಲಾಧಿಕಾರಿಗಳ ಆದೇಶವನ್ನು ಪಾಲನೆ ಮಾಡದೆ ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತೆ ಹಾಗೂ ಬೇಜವಾಬ್ದಾರಿತನ ತೋರ್ಪಡಿಸಿದ್ದರಿಂದ ಈ ದೋಷರೋಪಣೆ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಕೋಲಾರ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:29-05-2003ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆ ಆಗದಂತೆ ಎರಡು ವರ್ಷಗಳ ಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೇಂದ್ರ ವಲಯ, ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:15-10-2003ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಒಬ್ಬ

ಜವಾಬ್ದಾರಿಯುತ ಪೊಲೀಸ್ ಅಧಿಕಾರಿಯಾಗಿದ್ದು, ಯಾರೋ ಒಬ್ಬ ಕಳ್ಳ ಪ್ರಜ್ಞಾಹೀನ ಸ್ಥಿತಿಯಲ್ಲಿದ್ದಾನೆಂದು ತಿಳಿಸಿದ್ದರೂ, ನಿಸ್ತಂತು ಮೂಲಕ ಕೋಲಾರಿನ ಸರ್ಕಾರಿ ಆಸ್ಪತ್ರೆಗೆ ಬರುವಂತೆ ಸಿಪಿಐ ರವರೇ ತಿಳಿಸಿದ್ದರೂ, ಅಲ್ಲಿಗೂ ಸಹ ಹೋಗದೇ ಅತೀವ ನಿರ್ಲಕ್ಷತನ, ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಕಂಡುಬರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಕರ್ತವ್ಯ ಪಾಲನೆಯಲ್ಲಿ ಉದಾಸೀನತೆ ಪ್ರದರ್ಶಿಸಿರುತ್ತಾರೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 234 ಪೊಸಿಅ 2003 ಬೆಂಗಳೂರು, ದಿನಾಂಕ:18ನೇ ಸೆಪ್ಟೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಗೋಪಾಲಯ್ಯಶೆಟ್ಟಿ, ಎಎಸ್ಐ ಕೋಲಾರ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:07-11-2003ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 1444

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ವೈ.ಡಿ.ಅಗಸಿಮನಿ, ಪಿಎಸ್ಐ., ಧಾರವಾಡ ಪೊಲೀಸ್ ಠಾಣೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಧಾರವಾಡ ಜಿಲ್ಲೆ, ಇವರ ಆದೇಶ ಸಂಖ್ಯೆ:ಸಿಬ್ಬಂದಿ/6/ಸಿಆರ್-15/2004-05, ಆಪು ಸಂಖ್ಯೆ:561/2004-05, ದಿನಾಂಕ:15-02-2005.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ:ಅಪೀಲು/32/ವ/ಉವ/2005, ದಿನಾಂಕ:18-11-2005.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:23-12-2005
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/ 2/8/2006, ದಿನಾಂಕ:21-04-2006.

**ಪ್ರಸ್ತಾವನೆ:**

ಶ್ರೀ ವೈ.ಡಿ.ಅಗಸಿಮನಿ, ಪಿಎಸ್ಐ ಧಾರವಾಡ ಗ್ರಾಮೀಣ ಪೊಲೀಸ್ ಠಾಣೆ, ಧಾರವಾಡ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 7ರಡಿ ದೋಷಾರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷಾರೋಪಣೆ:**

"2004ನೇ ಸಾಲಿನ ಜನವರಿ ತಿಂಗಳಿನಿಂದ ಮೇ ತಿಂಗಳವರೆಗೆ ಅತೀ ಕಡಿಮೆ ಪ್ರಮಾಣದಲ್ಲಿ ಎಂ.ವಿ.ಆಕ್ಟ್ ಅಡಿಯಲ್ಲಿ ದಾಖಲು ಮಾಡಿ ಕರ್ತವ್ಯದಲ್ಲಿ ಖಂಡನೀಯ ಬೇಜವಾಬ್ದಾರಿತನ, ಅಲಕ್ಷ್ಯತನ, ನಿಷ್ಕಾಳಜಿತನ ಹಾಗೂ ಮೇಲಾಧಿಕಾರಿಗಳ ಆದೇಶ ಉಲ್ಲಂಘನೆ ಮಾಡಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಧಾರವಾಡ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:15-02-2005ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಮುಂಬರುವ ವಾರ್ಷಿಕ ವೇತನ ಬಡ್ತಿಗೆ ಪರಿಣಾಮ ಬೀರದಂತೆ ಆರು (6) ತಿಂಗಳ ಅವಧಿಗೆ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಉತ್ತರ ವಲಯ, ಬೆಳಗಾವಿ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ: 18.11.2005ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಜನವರಿ 2004 ರಿಂದ ಮೇ

2004 ರವರೆಗೆ ಸುಮಾರು 164 ಕೇಸುಗಳನ್ನು ಹೈ ಬೀಮ್ ಲೈಟುಗಳು, ಡ್ಯಾಜಲಿಂಗ್ ಲೈಟುಗಳು ಲೈಸೆನ್ಸ್ ಹಾಜರುಪಡಿಸದಿರುವುದು, ಮಿತಿಗಿಂತ ಹೆಚ್ಚಿನ ಜನರನ್ನು ಹಾಕಿದ್ದು, ಇತರೆ ಕೇಸುಗಳನ್ನು ದಾಖಲಿಸಿದ್ದರೂ ಎಂ.ವಿ.ಆಕ್ಟ್ ನಡಿ ಒಂದೇ ಒಂದು ಪ್ರಕರಣ ಸಹ ದಾಖಲಿಸದೇ ಇರುವುದೂ, ಮದ್ಯ ಸೇವನೆ ಮಾಡಿದ ವಾಹನ ಚಾಲಕರ ವಿರುದ್ಧ ಕೇಸನ್ನು ದಾಖಲಿಸದಿರುವುದು ಇವರ ನಿರ್ಲಕ್ಷತೆ, ಹಾಗೂ ಬೇಜವಾಬ್ದಾರಿತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ಲಘು ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 276 ಪೊಸಿಅ 2006 ಬೆಂಗಳೂರು, ದಿನಾಂಕ: 27ನೇ ಸೆಪ್ಟೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ವೈ.ಡಿ.ಅಗಸಿಮನಿ, ಪಿಎಸ್ಐ ಧಾರವಾಡ ಗ್ರಾಮೀಣ ಪೊಲೀಸ್ ಠಾಣೆ, (ಹಾಲಿ ಮುಂಡರಗಿ ಪೊಲೀಸ್ ಠಾಣೆ ಗದಗ) ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:23-12-2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 1443

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ವೈ.ಡಿ.ಅಗಸಿಮನಿ, ಪಿಎಸ್ಐ., ಧಾರವಾಡ ಗ್ರಾಮೀಣ ಪೊಲೀಸ್ ಠಾಣೆ, ಧಾರವಾಡ ಜಿಲ್ಲೆ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಧಾರವಾಡ ಜಿಲ್ಲೆ, ಇವರ ಆದೇಶ ಸಂಖ್ಯೆ:ಸಿಬ್ಬಂದಿ/6/ಸಿಆರ್-69/2004-05, ಆಪು ಸಂಖ್ಯೆ:10/2005-06, ದಿನಾಂಕ:4-4-2005.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ:ಅಪೀಲು/32/ಉವ/2005, ದಿನಾಂಕ:18-11-2005.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:23-12-2005
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/8/2006, ದಿನಾಂಕ:21-04-2006.

**ಪ್ರಸ್ತಾವನೆ:**

ಶ್ರೀ ವೈ.ಡಿ.ಅಗಸಿಮನಿ, ಪಿಎಸ್ಐ ಧಾರವಾಡ ಗ್ರಾಮೀಣ ಪೊಲೀಸ್ ಠಾಣೆ, ಧಾರವಾಡ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 7ರಡಿ ದೋಷಾರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷಾರೋಪಣೆ:**

"ಧಾರವಾಡ ಗ್ರಾಮೀಣ ಠಾಣೆ, ಗುನ್ನಾ, ಸಂ.216/03ರ ಪ್ರಕರಣದಲ್ಲಿ ನೀವು ತನಿಖಾಧಿಕಾರಿಯಾಗಿದ್ದು, ಸದರಿ ಪ್ರಕರಣ ನ್ಯಾಯಾಲಯದಲ್ಲಿ ಚವಕಸಿಯಲ್ಲಿರುವಾಗ, ನ್ಯಾಯಾಲಯವು ಸಾಕಷ್ಟು ಕಾಲಾವಕಾಶ ನೀಡಿದ್ದರೂ, ನ್ಯಾಯಾಲಯಕ್ಕೆ ಹಾಜರಾಗಿ ಸಾಕ್ಷಿ ನೀಡಿರುವುದಿಲ್ಲ ಮತ್ತು ಸದರಿ ಪ್ರಕರಣದಲ್ಲಿ ರಕ್ತಸಿಕ್ತ ಬಟ್ಟೆಗಳನ್ನು ಜಪ್ತಿ ಮಾಡದೆ, ಸರಿಯಾಗಿ ತನಿಖೆ ಮಾಡುವಲ್ಲಿ ವಿಫಲರಾಗಿದ್ದು, ಸದರಿ ಪ್ರಕರಣ ಬಿಡುಗಡೆ ಆಗುವಲ್ಲಿ ಕಾರಣರಾಗಿ, ನಿಮ್ಮ ಕರ್ತವ್ಯದಲ್ಲಿ ಖಂಡನೀಯ ಬೇಜವಾಬ್ದಾರಿತನ, ನಿರ್ಲಕ್ಷತನ ತೋರಿ, ನ್ಯಾಯಾಲಯದ ಆದೇಶ ಉಲ್ಲಂಘನೆ ಮಾಡಿರುವಿರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಧಾರವಾಡ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:4.4.2005ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆ ಆಗದಂತೆ ಆರು (6) ತಿಂಗಳ ಅವಧಿಗೆ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಉತ್ತರ ವಲಯ, ಬೆಳಗಾವಿ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ: 18.11.2005ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಒಬ್ಬ ಜವಾಬ್ದಾರಿಯುತ ಪೊಲೀಸ್ ಅಧಿಕಾರಿಯಾಗಿದ್ದು, ತಮ್ಮ ಕರ್ತವ್ಯದಲ್ಲಿ ನಿರ್ಲಕ್ಷತನ ಎಸಗಿರುವುದು ಕಂಡುಬರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ್ದು, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ಲಘು ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 249 ಪೊಸಿಅ 2006 ಬೆಂಗಳೂರು, ದಿನಾಂಕ: 20ನೇ ಸೆಪ್ಟೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ವೈ.ಡಿ.ಅಗಸಿಮನಿ, ಪಿಎಸ್ಐ ಧಾರವಾಡ ಗ್ರಾಮೀಣ ಪೊಲೀಸ್ ಠಾಣೆ, ಧಾರವಾಡ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:23-12-2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 1442

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ರಾಮಕೃಷ್ಣ, ಎಹೆಚ್‌ಸಿ-172, ಶ್ರೀ ಎಂ.ಜಾರ್ಜ್, ಎಪಿಸಿ 1517, ಮತ್ತು ಶ್ರೀ ರಾಜು, ಎಪಿಸಿ-59, ಬೆಂಗಳೂರು ನಗರ ರವರುಗಳು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯ ಬಗ್ಗೆ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮೀಷನರ್, ನಗರ ಸಶಸ್ತ್ರ ಮೀಸಲು ಪಡೆ (ದಕ್ಷಿಣ) ಬೆಂಗಳೂರು ಇವರ ಆದೇಶ ಸಂಖ್ಯೆ:ಡಿಇ/7/1999-2000, ಓಬಿ ಸಂಖ್ಯೆ:387/2003, ದಿನಾಂಕ: 06-09-2003.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಕಮೀಷನರ್, ಆಡಳಿತ ಮತ್ತು ಸಿಎಆರ್ ಬೆಂಗಳೂರು ನಗರ ಇವರ ಆದೇಶ ಸಂಖ್ಯೆ:83/ಅಪೀಲು/2003, ದಿನಾಂಕ:02-07-2004.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:18-03-2006
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/ 2/13/2006, ದಿನಾಂಕ:22-06-2006.

**ಪ್ರಸ್ತಾವನೆ:**

ಶ್ರೀ ರಾಮಕೃಷ್ಣ, ಎಹೆಚ್‌ಸಿ-172, `ಜಿ` ಪಂಗಡ, ಶ್ರೀ ಎಂ.ಜಾರ್ಜ್, ಎಪಿಸಿ-1517, ಮತ್ತು ಶ್ರೀ ರಾಜು ಎಪಿಸಿ-59, ಸಿಎಆರ್ (ದಕ್ಷಿಣ) ಇವರುಗಳ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6 ಮತ್ತು 8 ರಡಿ ಜಂಟಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

1. ''ಶ್ರೀ ರಾಮಕೃಷ್ಣ, ಎಹೆಚ್‌ಸಿ-172, `ಜಿ` ಪಂಗಡ, ಸಿಎಆರ್ (ದಕ್ಷಿಣ) ಎಪಿಸಿ ಶ್ರೀ ಎಂ.ಜಾರ್ಜ್ -1517, ಶ್ರೀ ರಾಜು ಎಪಿಸಿ-59, HQ ಪಂಗಡ, ಸಿಎಆರ್ (ದ) ಬೆಂಗಳೂರು ಆದ ನಿಮ್ಮನ್ನು ದಿನಾಂಕ:11-05-1999ರಂದು ನಗರದ ಕೇಂದ್ರ ಕಾರಾಗೃಹದಿಂದ ವಿಚಾರಣಾಧೀನ ಖೈದಿಗಳನ್ನು ನಿಮ್ಹಾನ್ಸ್ ಆಸ್ಪತ್ರೆಯಲ್ಲಿ ಚಿಕಿತ್ಸೆಯನ್ನು ಕೊಡಿಸುವ ಸಲುವಾಗಿ ಬೆಂಗಾವಲು ಕರ್ತವ್ಯಕ್ಕೆ ನೇಮಿಸಿ ಕಳುಹಿಸಲಾಗಿದ್ದು, ನೀವುಗಳು ಮೂರು ಜನ ಖೈದಿಗಳನ್ನು ನಗರದ ಕೇಂದ್ರ ಕಾರಾಗೃಹದಿಂದ ನಿಮ್ಮ ವಶಕ್ಕೆ ತೆಗೆದುಕೊಂಡು, ಸದರಿ ದಿನ ಎರಡು ಜನ ಖೈದಿಗಳನ್ನು ಮಾತ್ರ ಕಾರಾಗೃಹದ ವಶಕ್ಕೆ ಕೊಟ್ಟಿದ್ದು, ಉಳಿದ ಖೈದಿ ತನ್ವೀರ್ ಅಹ್ಮದ್‌ನನ್ನು ನಗರದ ವಿವಿಧ ಸ್ಥಳ ಗಳಿಗೆ ಕರೆದುಕೊಂಡು ಹೋಗಿ, ನಿಯಮಾನುಸಾರವಾಗಿ ಬೆಂಗಾವಲು ಮಾಡದೇ, ನಿಮ್ಮಗಳ ಅಜಾಗರೂಕತೆಯಿಂದ ಮತ್ತು ಕರ್ತವ್ಯದ ನಿರ್ಲಕ್ಷತೆಯಿಂದ ಕುಖ್ಯಾತ ಖೈದಿ ತನ್ವೀರ್ ಅಹ್ಮದ್ ಇವರು ತಪ್ಪಿಸಿಕೊಳ್ಳಲು ಅವಕಾಶವನ್ನು ಮಾಡಿಕೊಟ್ಟಿರುವುದರಿಂದ, ನಿಮ್ಮ ಕರ್ತವ್ಯದಲ್ಲಿ ಉದಾಸೀನತೆ ಮತ್ತು ಅಜಾಗರೂಕತೆಯಿಂದ ನಡೆದುಕೊಂಡಿರುವುದು ಎತ್ತಿ ತೋರಿಸುತ್ತದೆ.''

2. ''ಶ್ರೀ ರಾಮಕೃಷ್ಣ, ಎಹೆಚ್‌ಸಿ-172, `ಜಿ` ಪಂಗಡ, ಸಿಎಆರ್ (ದ) ಎಪಿಸಿ-1517 ಎಂ.ಜಾರ್ಜ್, ಎಪಿಸಿ-59 ರಾಜ HQ ಪಂಗಡ, ಸಿಎಆರ್ (ದ) ಬೆಂಗಳೂರು ಆದ ನಿಮ್ಮನ್ನು ದಿನಾಂಕ:11-05-1999ರಂದು ನಗರದ ಕೇಂದ್ರ ಕಾರಾಗೃಹದಿಂದ

ವಿಚಾರಣಾಧೀನ ಖೈದಿಗಳಾದ ಮಹ್ಮದ್‌ಸಾಬ್, ಚಿದಾನಂದ ವಾಗ್ಮೋರೇ ಮತ್ತು ತನ್ವೀರ್ ಅಹ್ಮದ್ ಇವರನ್ನು ನಗರದ ನಿಮ್ಹಾನ್ಸ್ ಆಸ್ಪತ್ರೆಗೆ ಚಿಕಿತ್ಸೆಯನ್ನು ಕೊಡಿಸುವ ಸಲುವಾಗಿ ಬೆಂಗಾವಲು ಕರ್ತವ್ಯಕ್ಕೆ ನೇಮಿಸಿ ಕಳುಹಿಸಲಾಗಿದ್ದು, ನೀವುಗಳು ಮೂರು ಜನ ಖೈದಿಗಳನ್ನು ನಗರದ ಕೇಂದ್ರ ಕಾರಾಗೃಹದಿಂದ ನಿಮ್ಮ ವಶಕ್ಕೆ ತೆಗೆದುಕೊಂಡು, ನಗರದ ನಿಮ್ಹಾನ್ಸ್ ಆಸ್ಪತ್ರೆಯಲ್ಲಿ ಇಬ್ಬರು ಖೈದಿಗಳಿಗೆ ಮಾತ್ರ ಚಿಕಿತ್ಸೆ ಕೊಡಿಸಿ, ಉಳಿದ ಒಂದು ಖೈದಿ ತನ್ವೀರ್ ಅಹ್ಮದ್‌ನನ್ನು ಇವರ ಇಷ್ಟಾನುಸಾರವಾಗಿ ದುರುದ್ದೇಶದಿಂದ ಸ್ವಂತ ಲಾಭಕ್ಕೋಸ್ಕರ ನಗರದ ವಿವಿಧ ಸ್ಥಳಗಳಿಗೆ ಕರೆದುಕೊಂಡು ಹೋಗಿರುತ್ತೀರಿ. ನೀವು ಪೊಲೀಸ್ ಇಲಾಖೆಯಲ್ಲಿ ಕರ್ತವ್ಯವನ್ನು ನಿರ್ವಹಿಸುತ್ತಿದ್ದು, ಪೊಲೀಸ್ ಮ್ಯಾನ್ಯುಯಲ್ ಪ್ರಕಾರ ಬೆಂಗಾವಲು ಕರ್ತವ್ಯ ಮಾಡದೇ, ಅಜಾಗರೂಕತೆಯಿಂದ ಕರ್ತವ್ಯನಿರ್ವಹಿಸಿದ್ದರಿಂದ, ಖೈದಿ ತನ್ವೀರ್ ಅಹ್ಮದ್ ನಿಮ್ಮ ಬೆಂಗಾವಲು ವಶದಿಂದ ತಪ್ಪಿಸಿಕೊಂಡಿರುವ ಬಗ್ಗೆ ವಿಲ್ಸನ್ ಗಾರ್ಡನ್ ಪೊಲೀಸ್ ಠಾಣೆಯಲ್ಲಿ ಕ್ರಿಮಿನಲ್ ಕೇಸು ದಾಖಲಾಗಿರುವುದು ಇಲಾಖೆಗೆ ಅಗೌರವ ತರುವಂತಹ ಹೇಯ ಕೃತ್ಯವೆಸಗಿ, ಭಾರಿ ಕರ್ತವ್ಯ ಲೋಪ ಪ್ರದರ್ಶಿಸಿರುವುದು ಎತ್ತಿ ತೋರಿಸುತ್ತದೆ.''

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಪೊಲೀಸ್ ಸಿಎಆರ್ (ದ) ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:06-09-2003ರ ಆದೇಶದಲ್ಲಿ ಅರ್ಜಿದಾರರುಗಳ ವೇತನವನ್ನು ಅವರ ಹುದ್ದೆಯ ವೇತನ ಶ್ರೇಣಿಯ ಕನಿಷ್ಟ ಮಟ್ಟಕ್ಕೆ ಐದು (5) ವರ್ಷಗಳ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಇಳಿಸಿ, ಹೊಸದಾಗಿ ವಾರ್ಷಿಕ ವೇತನ ಬಡ್ತಿಗಳನ್ನು ಪಡೆಯುವ ದಂಡನೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಕಮೀಷನರ್, ಆಡಳಿತ ಮತ್ತು ಸಿಎಆರ್ ಬೆಂಗಳೂರು, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲದಿದ್ದರೂ, ಶಿಸ್ತು ಪ್ರಾಧಿಕಾರಿಯ ಆದೇಶವು ದೋಷಪೂರಿತವಾಗಿರುವ ಕಾರಣ ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:02-07-2004ರ ಆದೇಶದಲ್ಲಿ ಮೇಲ್ಮನವಿಯನ್ನು ಪರಿಶೀಲಿಸಿ, ಶಿಸ್ತು ಪ್ರಾಧಿಕಾರಿಯ ಆದೇಶವನ್ನು ಭಾಗಶ: ಮಾರ್ಪಡಿಸಿ, ಅರ್ಜಿದಾರರುಗಳ ವೇತನವನ್ನು ಅವರುಗಳು ಹೊಂದಿರುವ ಹುದ್ದೆಯ ಕನಿಷ್ಟ ಮಟ್ಟಕ್ಕೆ ಐದು (5) ವರ್ಷಗಳ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆ ಆಗುವಂತೆ ಇಳಿಸಿದ ದಂಡನ ವಿಧಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರುಗಳು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಗಳನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಗಳಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರುಗಳ ವಿರುದ್ಧದ ಆರೋಪಗಳು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿರುತ್ತದೆ. ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಬೆಂಗಾವಲು ಕಾರ್ಯಕ್ಕೆಂತಲೇ ನಿಯೋಜಿಸಿದ್ದರೂ, ತಮ್ಮ ಬೇಜವಾಬ್ದಾರಿತನದಿಂದ ಖೈದಿ ಪರಾರಿಯಾಗಲು ಕಾರಣರಾಗಿದ್ದು, ವಿಲ್ಸನ್ ಗಾರ್ಡನ್ ಪೊಲೀಸ್ ಠಾಣೆಯಲ್ಲಿ ಪೊಲೀಸ್ ಸಿಬ್ಬಂದಿಯ ಮೇಲೇಯೇ ಕ್ರಿಮಿನಲ್ ಕೇಸು ದಾಖಲಾಗಿರುವುದು ಇಲಾಖೆಯ ಘನತೆಗೆ ಕುಂದು ಬರುವಂತಹ ಹೇಯ ಕೃತ್ಯ ಎಸಗಿರುತ್ತಾರೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷ್ಯತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆಯನ್ನು ಈಗಾಗಲೇ ಮೇಲ್ಮನವಿ ಪ್ರಾಧಿಕಾರಿ ಭಾಗಶ: ಮಾರ್ಪಡಿಸಿರುವ ಕಾರಣ, ಈ ಆದೇಶಗಳಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 285 ಪೊಸಿಅ 2006 ಬೆಂಗಳೂರು, ದಿನಾಂಕ:19ನೇ ಸೆಪ್ಟೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ರಾಮಕೃಷ್ಣ, ಎಹೆಚ್‌ಸಿ-172, ಶ್ರೀ ಎಂ.ಜಾರ್ಜ್, ಎಪಿಸಿ-1517, ಮತ್ತು ಶ್ರೀ ರಾಜು, ಎಪಿಸಿ-59, ಬೆಂಗಳೂರು ನಗರ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:18-03-2006ರ ಪರಿಷ್ಕರಣ ಮೇಲ್ಮನವಿ ಅರ್ಜಿಗಳನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 1473

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಎಂ.ಕೆ.ಗಡ್, ನಿವೃತ್ತ ಕೆಎಎಸ್ ಅಧಿಕಾರಿ, ಹಿಂದಿನ ಆಯುಕ್ತರು, ನಗರಸಭೆ, ಶಿವಮೊಗ್ಗ ಅವರ ವಿರುದ್ಧ ನ್ಯಾಯಾಲಯದಲ್ಲಿ ದಾಖಲಿಸಿರುವ ಕ್ರಿಮಿನಲ್ ಪ್ರಕರಣದಲ್ಲಿ ಅಭಿಯೋಜನಾ ಮಂಜೂರಾತಿ ನೀಡುವ ಕುರಿತು.

**ಓದಲಾಗಿದೆ:**

1. ಪೊಲೀಸ್ ಸಬ್ ಇನ್ಸ್‌ಪೆಕ್ಟರ್, ಕೋಟೆ ಪೊಲೀಸ್ ಠಾಣೆ, ಶಿವಮೊಗ್ಗ ಅವರ ಪತ್ರ ಸಂಖ್ಯೆ:ಎಪಿಎಸ್/ ಸಿಆರ್/ನಂ/180/ 2000 ದಿ:24.11.05.
2. ಜಿಲ್ಲಾ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಅವರ ಪತ್ರ ಸಂಖ್ಯೆ:ಸಿಆರ್‌ಎಂ(2)/45/2006 ದಿ:04.02.06.

**ಪ್ರಸ್ತಾವನೆ:**

1987ರ ಸಾಲಿನಲ್ಲಿ ಶಿವಮೊಗ್ಗ ನಗರಸಭೆಯ ಆಯುಕ್ತರಾಗಿ ಶ್ರೀ ಎಂ.ಕೆ.ಗಡ್, ನಿವೃತ್ತ ಕೆಎಎಸ್ ಅಧಿಕಾರಿ ಅವರು, ಶ್ರೀ ಚಂದ್ರಪ್ಪ ಅವರು ವ್ಯವಸ್ಥಾಪಕರಾಗಿ ಹಾಗೂ ಶ್ರೀ ಎಸ್.ವಿ.ಸಿದ್ದಪ್ಪ ಅವರು ರಾಜಸ್ವ ನಿರೀಕ್ಷಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಅವರುಗಳು ಇತರರೊಂದಿಗೆ ಷಾಮೀಲಾಗಿ ಶಿವಮೊಗ್ಗದಲ್ಲಿ ಶ್ರೀಮತಿ ಭುಜಂಗವೇಣಿ ಕೋಂ ಲೇಟ್ ಆನಂದರಾವ್, ರಾಜೇಂದ್ರನಗರ, ಶಿವಮೊಗ್ಗ ಅವರಿಗೆ ಸರ್ಕಾರದಿಂದ ಮಂಜೂರಾಗಿದ್ದ ಮುನಿಸಿಪಲ್ ಖಾತೆ ಸಂಖ್ಯೆ:281ರ ಖಾಲಿ ನಿವೇಶನವನ್ನು ಕಾಲ್ಪನಿಕ ವ್ಯಕ್ತಿಯಾದ ಶ್ರೀಮತಿ ಭುಜಂಗವಾಣಿ ಕೋಂ ಆನಂದರಾವ್, ಬನಶಂಕರಿ ಬಡಾವಣೆ, ಶಿವಮೊಗ್ಗ ಎಂಬುವವರಿಗೆ ಮಂಜೂರು ಮಾಡಿಕೊಟ್ಟಿರುತ್ತಾರೆ. ಅನಂತರ ಕಾಲ್ಪನಿಕ ವ್ಯಕ್ತಿಯಾದ ಶ್ರೀಮತಿ ಭುಜಂಗವಾಣಿ ಕೋಂ ಆನಂದರಾವ್ ಅವರಿಂದ ಶ್ರೀ ಕುಬೇರಪ್ಪ ಎಂಬುವವರಿಗೆ ಅದೇ ಖಾಲಿ ನಿವೇಶನವನ್ನು ಮಾರಲ್ಪಟ್ಟು ಹಾಲಿ ಅವರು ಖಾಲಿ ನಿವೇಶನದಲ್ಲಿ ಒಂದು ಆರ್.ಸಿ.ಸಿ. ಮನೆಯನ್ನು ಕಟ್ಟಿಕೊಂಡು ವಾಸವಾಗಿರುತ್ತಾರೆ. ಮೇಲ್ಕಂಡ ಆರೋಪಿತರುಗಳು ಸುಳ್ಳು ದಾಖಲಾತಿಗಳನ್ನು ಸೃಷ್ಟಿಸಿರುವುದು ಕಂಡು ಬಂದ ಹಿನ್ನೆಲೆಯಲ್ಲಿ ಅವರುಗಳ ವಿರುದ್ಧ ಕ್ರಿಮಿನಲ್ ದೂರು ಸಂಖ್ಯೆ:180/2000 ಕಲಂ 420,467,468 ಸಂಹಿತ 34 ಐಪಿಸಿ ರೀತ್ಯಾ ದಾಖಲು ಮಾಡಿದ್ದು, ಈ ಹಿನ್ನೆಲೆಯಲ್ಲಿ ಅವರುಗಳಿಗೆ ನ್ಯಾಯಾಲಯದಲ್ಲಿ ದೋಷಾರೋಪಣೆ ಪಟ್ಟಿಗಳನ್ನು ಸಲ್ಲಿಸಲು ಅನುಕೂಲವಾಗುವಂತೆ ಅಭಿಯೋಜನಾ ಮಂಜೂರಾತಿ ಆದೇಶವನ್ನು ನೀಡುವಂತೆ ಮೇಲೆ (1)ರಲ್ಲಿ ಓದಲಾದ ದಿ:24.11.05ರ ಪತ್ರದಲ್ಲಿ ಶಿವಮೊಗ್ಗದ ಕೋಟೆ ಪೊಲೀಸ್ ಠಾಣೆಯ ಸಬ್ ಇನ್ಸ್‌ಪೆಕ್ಟರ್ ಕೋರಿರುತ್ತಾರೆ.

ನಿಜವಾದ ಭುಜಂಗವೇಣಿಯವರಿಗೆ ಹಾಗೂ ಸರ್ಕಾರಕ್ಕೆ ಮೋಸ ಮಾಡಿ ಸುಳ್ಳು ದಾಖಲಾತಿಗಳನ್ನು ಸೃಷ್ಟಿಸಿ ಅಪರಾಧ ಮಾಡಿರುವ ಆರೋಪಿಗಳಾದ ಶ್ರೀ ಪಿ.ರಾಮಪ್ಪ, ಮಾಜಿ ಅಧ್ಯಕ್ಷರು, ಶ್ರೀ ಭಗತ್ ಕುಮಾರ್, ಮಾಜಿ ಮುನಿಸಿಪಲ್ ಸದಸ್ಯರು, ಶ್ರೀ ಹೆಚ್.ಕುಬೇರಪ್ಪ, ಶ್ರೀ ಎಂ.ಎಸ್.ಒಡೆಯರ್, ವಕೀಲರು, ಶ್ರೀ ಎಂ.ಕೆ.ಗಡ್, ಕೆಎಎಸ್, ಹಿಂದಿನ ಆಯುಕ್ತರು, ಕಾಲ್ಪನಿಕ ವ್ಯಕ್ತಿ ಭುಜಂಗವಾಣಿ, ವ್ಯವಸ್ಥಾಪಕರಾದ ಶ್ರೀ ಟಿ.ಚಂದ್ರಪ್ಪ, ರಾಜಸ್ವ ನಿರೀಕ್ಷಕರಾದ ಶ್ರೀ ಎಸ್.ವಿ.ಸಿದ್ದಪ್ಪ ಅವರುಗಳ ಮೇಲೆ ಕಾನೂನು ರೀತ್ಯಾ ಕ್ರಮ ಕೈಗೊಳ್ಳುವ ಬಗ್ಗೆ ಶಿವಮೊಗ್ಗ ನಗರಸಭೆಯ ಆಯುಕ್ತರಾಗಿ ಬಂದ ಶ್ರೀ ಕೆ.ಎಸ್.ಚಂದ್ರಶೇಖರ್‌ರವರು ಶಿವಮೊಗ್ಗದ ಮಾನ್ಯ ಪಿ.ಸಿ.ಜೆ.ಎಂ. ನ್ಯಾಯಾಲಯಕ್ಕೆ ದೂರು ನೀಡಿದ್ದು, ಈ ದೂರನ್ನು ದಾಖಲಿಸಿ ತನಿಖೆ ನಡೆಸುವಂತೆ ಮಾನ್ಯ ನ್ಯಾಯಾಲಯದಿಂದ ಪಿ.ಸಿ.ಆರ್. 134/2000ರಲ್ಲಿ ಶಿವಮೊಗ್ಗ ಕೋಟೆ ಪೊಲೀಸ್ ಠಾಣೆಗೆ ಕಳುಹಿಸಿ ಕೊಟ್ಟಿದ್ದನ್ನು ಠಾಣೆಯ ಗುನ್ನೆ ಸಂಖ್ಯೆ:180/2000 ಕಲಂ 420,467 ಸಂಹಿತ 34 ಐ.ಪಿ.ಸಿ. ರೀತ್ಯಾ ಗುನ್ನೆ ದಾಖಲಿಸಿಕೊಳ್ಳಲಾಗಿತ್ತು. ಮಾಡಿರುವ ಆರೋಪವು ತನಿಖೆ ಕಾಲದಲ್ಲಿ ಮೇಲ್ನೋಟಕ್ಕೆ ಸಾಬೀತಾಗಿದ್ದು, ಈ ಪ್ರಕರಣದಲ್ಲಿನ ಆಪಾದಿತರುಗಳಾದ ಶ್ರೀ ಟಿ.ಚಂದ್ರಪ್ಪ, ವ್ಯವಸ್ಥಾಪಕರು ಹಾಗೂ ಶ್ರೀ ಎಸ್.ವಿ.ಸಿದ್ದಪ್ಪ, ರಾಜಸ್ವ ನಿರೀಕ್ಷಕರು, ನಗರಸಭೆ, ಶಿವಮೊಗ್ಗ ಇವರುಗಳ ವಿರುದ್ಧ ನ್ಯಾಯಾಲಯದಲ್ಲಿ ದೋಷಾರೋಪಣೆಗಳನ್ನು ಸಲ್ಲಿಸಲು ಅನುಮತಿಯನ್ನು ನೀಡುವಂತೆ ಸರ್ಕಾರವನ್ನು (ನಗರಾಭಿವೃದ್ಧಿ ಇಲಾಖೆ) ಕೋರಿರುತ್ತಾರೆ. ಶ್ರೀ ಎಂ.ಕೆ.ಗಡ್, ನಿವೃತ್ತ ಕೆಎಎಸ್ ಅಧಿಕಾರಿ ಅವರು ಶಿವಮೊಗ್ಗ ನಗರಸಭೆಯ ಆಯುಕ್ತರಾಗಿದ್ದಾಗ ಮೇಲ್ಕಂಡ ಅಪರಾಧ ಎಸಗಿರುವುದು ಮೇಲ್ನೋಟಕ್ಕೆ ಸಾಬೀತಾಗಿ ಕಂಡುಬಂದಿರುವ ಹಿನ್ನೆಲೆಯಲ್ಲಿ ಅವರ ವಿರುದ್ಧ ಸಕ್ಷಮ ನ್ಯಾಯಾಲಯದಲ್ಲಿ ದೋಷಾರೋಪಣೆ ಪಟ್ಟಿ ಸಲ್ಲಿಸಲು ಅನುಕೂಲವಾಗುವಂತೆ ದಂಡ ಪ್ರಕ್ರಿಯ ಸಂಹಿತೆ ಕಲಂ 197ರನ್ವಯ ಅಭಿಯೋಜನೆಗೊಳಪಡಿಸುವುದು ಅವಶ್ಯಕವೆಂದು ಮನಗಂಡ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 22 ಎಸ್‌ಇಎನ್ 06 ಬೆಂಗಳೂರು ದಿನಾಂಕ:31ನೇ ಅಕ್ಟೋಬರ್ 2006.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಶ್ರೀ ಎಂ.ಕೆ.ಗಡ್, ನಿವೃತ್ತ ಕೆಎಎಸ್ ಅಧಿಕಾರಿ, ಹಿಂದಿನ ಆಯುಕ್ತರು, ನಗರಸಭೆ, ಶಿವಮೊಗ್ಗ ಇವರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಪಡಿಸಲು ದಂಡ ಪ್ರಕ್ರಿಯ ಸಂಹಿತೆ (ಸಿ.ಆರ್.ಪಿ.ಸಿ) 197ರ ಪ್ರಕಾರ ಸಕ್ಷಮ ಪ್ರಾಧಿಕಾರವು ಈ ಮೂಲಕ ಅಭಿಯೋಜನಾ ಮಂಜೂರಾತಿಯನ್ನು ನೀಡುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

ಪಿ.ಆರ್. 1572

**ವಿಷಯ:** ಶ್ರೀ ಎಸ್.ದಿವಾಕರ್, ಸರ್ಕಾರದ ಉಪ ಕಾರ್ಯದರ್ಶಿ, ಶಿಕ್ಷಣ ಇಲಾಖೆ ಅವರ ವಿರುದ್ಧ ಇಲಾಖಾ ವಿಚಾರಣೆ-ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**
1. ನೋಟೀಸ್ ಸಂಖ್ಯೆ:ಸಿಆಸುಇ 50 ಎಸ್ಇಎನ್ 98 ದಿನಾಂಕ:14.07.06.
2. ಶ್ರೀ ಎಸ್.ದಿವಾಕರ್, ಉಪ ಕಾರ್ಯದರ್ಶಿ ರವರ ದಿ:14.09.06ರ ಲಿಖಿತ ಉತ್ತರ.

**ಪ್ರಸ್ತಾವನೆ:**

ಶ್ರೀ ಎಸ್.ದಿವಾಕರ್, ಸರ್ಕಾರದ ಉಪ ಕಾರ್ಯದರ್ಶಿ, ಶಿಕ್ಷಣ ಇಲಾಖೆ, ಕರ್ನಾಟಕ ಸರ್ಕಾರದ ಸಚಿವಾಲಯ ರವರು ದಿ:15.03.1976 ರಿಂದ 28.02.1986ರ ಅವಧಿಯಲ್ಲಿ ಕರ್ನಾಟಕ ಭವನ, ನವದೆಹಲಿಯಲ್ಲಿ ಅಕೌಂಟೆಂಟ್ ಆಗಿ ಕಾರ್ಯನಿರ್ವಹಿಸುತ್ತಿದ್ದಾಗ, ತಮ್ಮ ಕರ್ತವ್ಯವನ್ನು ಸರಿಯಾಗಿ ಮಾಡದೇ ಸರ್ಕಾರದ ರೂ.68,285.45/- ಹಣವನ್ನು ದುರುಪಯೋಗಪಡಿಸಿಕೊಂಡಿರುವ ಮೂಲಕ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ 1966ರ ನಿಯಮ 3(i)(ii)(iii)ನ್ನು ಉಲ್ಲಂಘಿಸಿರುವ ಆರೋಪಗಳಿಗಾಗಿ ಶ್ರೀ ಎಸ್.ದಿವಾಕರ್ ಇವರಿಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ:14.07.06ರ ನೋಟೀಸನ್ನು ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ನೋಟೀಸಿಗೆ ಮೇಲೆ (2) ರಲ್ಲಿ ಓದಲಾದ ದಿನಾಂಕ:14.09.06ರ ಉತ್ತರ ಸಲ್ಲಿಸಿದ ಆರೋಪಿತ ಅಧಿಕಾರಿಯು ತಮ್ಮ ಮೇಲೆ ಹೊರಿಸಲಾದ ದೋಷಾರೋಪಣೆಯನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 50 ಎಸ್ಇಎನ್ 98 ಬೆಂಗಳೂರು, ದಿನಾಂಕ:2ನೇ ನವೆಂಬರ್ 2006.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ವಿ.ಪಿ.ಕೆದಿಲಾಯ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ವಿಚಾರಣೆಗಾಗಿ ಅವರು ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 16 ಸೇಇವಿ 05 ದಿನಾಂಕ:23.08.2005 ರಂತೆ ರೂ.6000/- ಗೌರವಧನ ಹಾಗೂ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 45 ಸೇಇವಿ 2001 ದಿನಾಂಕ: 4.3.2002 ರಂತೆ ರೂ.1000/- ವಾಹನ ಭತ್ಯೆಯನ್ನು ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಸರ್ಕಾರದ ಅಧೀನ ಕಾರ್ಯದರ್ಶಿ ಸಿಆಸುಇ (ರಾಜಕೀಯ ಶಿಷ್ಟಾಚಾರ-1) ಅವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಇತ್ಯಾದಿಗಳನ್ನು ಒದಗಿಸಲು ಮಂಡನಾಧಿಕಾರಿಯವರೇ ಕ್ರಮ ಕೈಗೊಳ್ಳುತ್ತಾರೆ. ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ರಘುರಾಮ್ ಭಂಡಾರಿ**

ಪಿ.ಆರ್. 1573

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

**ವಿಷಯ:** ಶ್ರೀ ಎಸ್.ಶಿವಾನಂದಶರ್ಮ, ನಿವೃತ್ತ ಕೆಎಎಸ್ ಅಧಿಕಾರಿ ಹಾಗೂ ಇತರರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ-ಶ್ರೀ ಜಯರಾಂ, ಸಹಾಯಕ ಇಂಜಿನಿಯರ್, ಶ್ರೀ ರಹಮತುಲ್ಲಾ,ಕಂದಾಯ ನಿರೀಕ್ಷಕರು ಮತ್ತು ಶ್ರೀ ಜಯರಾಜ್, ಹಿಂದಿನ ಗ್ರಾಮ ಲೆಕ್ಕಿಗ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಅವರುಗಳ ವಿರುದ್ಧ ಇಲಾಖಾ ವಿಚಾರಣೆ- ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 60 ಎಸ್ಇಎನ್ 92 ದಿ:30.03.01.
2. ವಿಚಾರಣಾ ವರದಿ ಸಂಖ್ಯೆ:ಲೋಕ್/ಎಆರ್ಇ-4/ಇಎನ್‌ಕ್ಯೂ-08/01-02 ದಿ:15.02.05.
3. ಉಪ ಲೋಕಾಯುಕ್ತರ ಪತ್ರ ಸಂಖ್ಯೆ:ಲೋಕ್/ಎಆರ್ಇ-4/ಇಎನ್‌ಕ್ಯೂ-08/01-02 ದಿ:18.11.05.
4. ನೋಟೀಸ್ ಸಂಖ್ಯೆ:ಸಿಆಸುಇ 60 ಎಸ್ಇಎನ್ 92 ದಿ:07.12.05.
5. ಶ್ರೀ ಜಯರಾಜ್, ರಾಜಸ್ವ ನಿರೀಕ್ಷಕರು ಅವರ ಉತ್ತರ ದಿ:09.03.06.

**ಪ್ರಸ್ತಾವನೆ:**

ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಲ್ಲಿ ಶ್ರೀ ಎಸ್.ಶಿವಾನಂದಶರ್ಮ, ನಿವೃತ್ತ ಕೆಎಎಸ್ ಅಧಿಕಾರಿ ಅವರು ವಿಶೇಷ ಭೂಸ್ವಾಧೀನಾಧಿಕಾರಿಯಾಗಿ, ಶ್ರೀ ಜಯರಾಂ ಅವರು ಸಹಾಯಕ ಇಂಜಿನಿಯರ್‌ರಾಗಿ, ಶ್ರೀ ರಹಮತುಲ್ಲಾ ಅವರು ಕಂದಾಯ

ನಿರೀಕ್ಷಕರಾಗಿ, ಶ್ರೀ ಜಯರಾಜ್ ಅವರು ಮಡಿವಾಳ ಗ್ರಾಮ ಪಂಚಾಯಿತಿಯಲ್ಲಿ ಗ್ರಾಮ ಲೆಕ್ಕಿಗರಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಹೊಸೂರು-ಸರ್ಜಾಪುರ ಬಡಾವಣೆ ನಿರ್ಮಾಣಕ್ಕಾಗಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದವರು ಸ್ವಾಧೀನಪಡಿಸಿಕೊಂಡಂತಹ ಬೇಗೂರು ಹೋಬಳಿ, ವೆಂಕೋಜಿರಾವ್ ಖಾನೆ ಸ.ನಂ.11ರಲ್ಲಿ ಬರುವ 136 ಎಕರೆ 30 ಗುಂಟೆ ಜಮೀನು ಸಂಪೂರ್ಣವಾಗಿ ಸರ್ಕಾರಿ ಜಮೀನಾಗಿದ್ದರೂ ಆ ಜಮೀನಿನ ಪೈಕಿ 7 ಎಕರೆ 30 ಗುಂಟೆ ಜಮೀನಿಗೆ ಶ್ರೀಮತಿ ರಾಜಮ್ಮ ಎಂಬ ನಕಲಿ ಮಹಿಳೆಯು ಜಮೀನಿನ ಮಾಲೀಕತ್ವ/ಒಡೆತನ ಹೊಂದಿರುವುದಾಗಿ ಖೋಟಾ ರೆವೆನ್ಯೂ ದಾಖಲೆಗಳನ್ನು ಸೃಷ್ಟಿಸುವಲ್ಲಿ ಷಾಮೀಲಾಗಿ ಮತ್ತು ಸಂಬಂಧಿತ ಜಮೀನು ವಿಲೇವಾರಿಯು ಆ ಮಹಿಳೆಗೆ ಸೇರಿದ್ದಾಗಿತ್ತೇ ಅಥವಾ ಸದರಿ ಜಮೀನು ಸರ್ಕಾರಕ್ಕೆ ಸೇರಿದ್ದೇ ಎನ್ನುವ ಬಗ್ಗೆ ಪರಿಶೀಲಿಸದೇ ಸದರಿ ಜಮೀನನ್ನು ವಶಕ್ಕೆ ತೆಗೆದುಕೊಂಡಂತೆ ಸಹಿ ಹಾಕುವ ಮೂಲಕ ಹಾಗೂ ಶ್ರೀಮತಿ ರಾಜಮ್ಮ ಎಂಬ ನಕಲಿ ಮಹಿಳೆಯ ಕ್ಲೇಂ ಸಾಚಾತನದಿಂದ ಕೂಡಿತ್ತೇ ಇಲ್ಲವೇ ಎಂಬುದನ್ನು ಖಚಿತಪಡಿಸಿಕೊಳ್ಳದೇ ಅವರಿಗೆ ಕಾನೂನು ಬಾಹಿರವಾಗಿ ಪರಿಹಾರ ಧನ ಪಾವತಿ ಮಾಡಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಕ್ಕೆ/ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟು ಮಾಡುವ ಮೂಲಕ ಕರ್ತವ್ಯ ನಿರ್ಲಕ್ಷ್ಯ ಮತ್ತು ಕರ್ತವ್ಯಚ್ಯುತಿ ಎಸಗಿದ ಆರೋಪಗಳಿಗಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 14-ಎ ರನ್ವಯ ಮೇಲ್ಕಂಡ ಅಧಿಕಾರಿ/ನೌಕರರುಗಳ ವಿರುದ್ಧ ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸನ್ಮಾನ್ಯ ಲೋಕಾಯುಕ್ತರ ಮೂಲಕ ಇಲಾಖಾ ವಿಚಾರಣೆಯನ್ನು ಆದೇಶಿಸಲಾಯಿತು. ಅವರಿಂದ ವಿಚಾರಣಾಧಿಕಾರಿಯಾಗಿ ನೇಮಕಗೊಂಡ ಹೆಚ್ಚುವರಿ ನಿಬಂಧಕರು ವಿಚಾರಣೆಗಳು-4 ಕರ್ನಾಟಕ ಲೋಕಾಯುಕ್ತ ಕಛೇರಿ ಅವರು ವಿಚಾರಣೆ ನಡೆಸಿ ಮೇಲೆ (2)ರಲ್ಲಿ ಓದಲಾದ ವಿಚಾರಣಾ ವರದಿಯನ್ನು ಉಪ ಲೋಕಾಯುಕ್ತರಿಗೆ ಸಲ್ಲಿಸಿ ಆರೋಪ ಕುರಿತು ಈ ಕೆಳಕಂಡ ನಿರ್ಣಯ ನೀಡಿದರು.

ಶ್ರೀ ಶಿವಾನಂದಶರ್ಮ, ನಿವೃತ್ತ ಕೆಎಎಸ್ ಅಧಿಕಾರಿ ಅವರು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಲ್ಲಿ ವಿಶೇಷ ಭೂಸ್ವಾಧೀನಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಶ್ರೀಮತಿ ರಾಜಮ್ಮ ಅವರು ಬೇಗೂರು ಹೋಬಳಿಯ ವೆಂಕೋಜಿರಾವ್ ಖಾನೆ ಸ.ನಂ.11ರಲ್ಲಿ ಬರುವ 136 ಎಕರೆ 30 ಗುಂಟೆ ಜಮೀನಿನ ಪೈಕಿ 7 ಎಕರೆ 30 ಗುಂಟೆ ಜಮೀನಿನ ಪರಿಹಾರ ಧನ ಪಡೆಯಲು ಸಲ್ಲಿಸಿದ್ದ ದಿ:12.03.90ರ ಅರ್ಜಿಯೊಂದಿಗೆ ಲಗತ್ತಿಸಲಾದ ದಾಖಲೆಗಳಾದ ಇನಾಂ ರದ್ದತಿ ಆದೇಶದ ಪ್ರತಿ, ವಿಶೇಷ ಜಿಲ್ಲಾಧಿಕಾರಿಗಳ ದೃಢೀಕರಣ ಪತ್ರದ ಪ್ರತಿ, ಭೂಕಂದಾಯ ಪಾವತಿಸಿದ ಪ್ರತಿ, ಆರ್.ಟಿ.ಸಿ. ಪ್ರತಿ, ಮ್ಯುಟೇಷನ್ ರಿಜಿಸ್ಟರ್‌ನ ಪ್ರತಿ, ಕಂದಾಯ ಬಾಕಿರಹಿತ ಪತ್ರದ ಪ್ರತಿ ಇತ್ಯಾದಿ ದಾಖಲೆಗಳ ನೈಜತೆಯ ಬಗ್ಗೆ ತಿಳಿದುಕೊಳ್ಳದೆ ಹಾಗೂ ಭೂಸ್ವಾಧೀನ ಪ್ರಕ್ರಿಯೆಯಲ್ಲಿ ತನ್ನ ಮೇಲಾಧಿಕಾರಿಗಳು ಕೊಟ್ಟ ಸೂಚನೆಗಳನ್ನು ಪಾಲಿಸದೇ ಅರ್ಜಿದಾರರ ಇರುವಿಕೆ ಬಗ್ಗೆ ಖಚಿತಪಡಿಸಿಕೊಳ್ಳದೇ ಅವಳ ವಾಸಸ್ಥಳ ತಿಳಿದುಕೊಳ್ಳದೇ, ಫೋಟೋ ಪಡೆದುಕೊಳ್ಳದೇ, ಅರ್ಜಿದಾರಳನ್ನು ಗುರುತಿಸುವ ಸಾಕ್ಷಿದಾರರ ಸಮ್ಮುಖದಲ್ಲಿ ಚೆಕ್ ನೀಡದೇ ದೊಡ್ಡ ಮೊತ್ತದ ಪರಿಹಾರ ಧನ ರೂ.8,67,535/-ಗಳ ಪರಿಹಾರ ಧನವನ್ನು ವಿತರಣೆ ಮಾಡಿ ಬಿ.ಡಿ.ಎ./ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟು ಮಾಡಿರುವ ಆರೋಪ ಸಾಬೀತಾಗಿದೆ.

ಶ್ರೀ ಜಯರಾಜ್ ಅವರು ಮಡಿವಾಳ ಗ್ರಾಮ ಪಂಚಾಯಿತಿಯ ಗ್ರಾಮ ಲೆಕ್ಕಿಗರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಶ್ರೀಮತಿ ರಾಜಮ್ಮ ಅವರು ಸ.ನಂ.11ರಲ್ಲಿ ಹೊಂದಿದ್ದಾರೆನ್ನಲಾದ 7 ಎಕರೆ 30 ಗುಂಟೆ ಜಮೀನಿಗೆ ಸಂಬಂಧಿಸಿದಂತೆ ಯಾವುದೇ ಮೂಲ ದಾಖಲೆ ತನ್ನ ಕಛೇರಿಯಲ್ಲಿ ಇಲ್ಲದಿದ್ದರೂ ತನ್ನ ಸಹಿ ಮಾಡಿ ಕಛೇರಿ ಮೊಹರಿನೊಂದಿಗೆ ಭೂಕಂದಾಯ ಪಾವತಿ ರಸೀತಿ, ಆರ್.ಟಿ.ಸಿ. ಪ್ರತಿ, ಮ್ಯುಟೇಷನ್ ರಿಜಿಸ್ಟರ್‌ನ ಪ್ರತಿ, ಕಂದಾಯ ಬಾಕಿರಹಿತ ಪತ್ರದ ಪ್ರತಿ ಇತ್ಯಾದಿ ಖೋಟಾ ದಾಖಲೆಗಳನ್ನು ಸೃಷ್ಟಿಸಿ ಶ್ರೀಮತಿ ರಾಜಮ್ಮನವರಿಗೆ ನೀಡಿರುವ ಆರೋಪ ಸಾಬೀತಾಗಿದೆ. ಶ್ರೀ ಜಯರಾಂ, ಸಹಾಯಕ ಇಂಜಿನಿಯರ್, ಶ್ರೀ ರಹಮತುಲ್ಲಾ, ಕಂದಾಯ ನಿರೀಕ್ಷಕರು ಅವರುಗಳ ವಿರುದ್ಧ ಮಾಡಲಾದ ಆರೋಪವು ಸಾಬೀತಾಗಿರುವುದಿಲ್ಲವೆಂಬ ನಿರ್ಣಯ ನೀಡಿರುತ್ತಾರೆ.

ವಿಚಾರಣಾ ವರದಿಯನ್ನು ಪರಾಮರ್ಶಿಸಿದ ಉಪ ಲೋಕಾಯುಕ್ತರವರು ದಿ:18.11.05ರ ಶಿಫಾರಸ್ಸಿನೊಡನೆ ವಿಚಾರಣಾ ವರದಿ ಹಾಗೂ ದಾಖಲೆಗಳನ್ನು ಸರ್ಕಾರಕ್ಕೆ ರವಾನಿಸಿರುತ್ತಾರೆ. ಹಾಗೂ ಶ್ರೀ ಶಿವಾನಂದಶರ್ಮ, ನಿವೃತ್ತ ಕೆಎಎಸ್ ಅಧಿಕಾರಿ ಅವರ ನಿವೃತ್ತಿ ವೇತನವನ್ನು ಸಂಪೂರ್ಣವಾಗಿ ಹಾಗೂ ಶಾಶ್ವತವಾಗಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 214(1)(a)ರನ್ವಯ ತಡೆಹಿಡಿಯುವ ದಂಡನೆಯನ್ನು, ಶ್ರೀ ಜಯರಾಜ್ ಅವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(viii)ರನ್ವಯ ಸೇವೆಯಿಂದ ವಜಾಗೊಳಿಸುವ ದಂಡನೆಯನ್ನು ಹಾಗೂ ಶ್ರೀ ಜಯರಾಂ, ಸಹಾಯಕ ಇಂಜಿನಿಯರ್ ಮತ್ತು ಶ್ರೀ ರಹಮತುಲ್ಲಾ, ಕಂದಾಯ ನಿರೀಕ್ಷಕರು ಅವರುಗಳ ವಿರುದ್ಧದ ಇಲಾಖಾ ವಿಚಾರಣೆಯನ್ನು ಕೈಬಿಡುವಂತೆ ಶಿಫಾರಸ್ಸು ಮಾಡಿರುತ್ತಾರೆ. ಆರೋಪ ಸಾಬೀತಾಗಿರುವ ಶ್ರೀ ಎಸ್.ಶಿವಾನಂದಶರ್ಮ, ನಿವೃತ್ತ ಕೆಎಎಸ್ ಅಧಿಕಾರಿ ಮತ್ತು ಶ್ರೀ ಜಯರಾಜ್, ಕಂದಾಯ ನಿರೀಕ್ಷಕರು ಅವರುಗಳಿಗೆ ವಿಚಾರಣಾ ವರದಿ ಹಾಗೂ ಲೋಕಾಯುಕ್ತರ ಶಿಫಾರಸ್ಸನ್ನು ಮೇಲೆ (4)ರಲ್ಲಿ ಓದಲಾದ ದಿ:07.12.05ರ ನೋಟೀಸ್‌ನೊಡನೆ ಒದಗಿಸಿ ಅವುಗಳ ಬಗ್ಗೆ ಏನಾದರೂ ಅಹವಾಲು ಇದ್ದಲ್ಲಿ ಸಲ್ಲಿಸಲು ಅವಕಾಶ ಕಲ್ಪಿಸಲಾಯಿತು.

ಶ್ರೀ ಎಸ್.ಶಿವಾನಂದಶರ್ಮ, ನಿವೃತ್ತ ಕೆಎಎಸ್ ಅಧಿಕಾರಿ ಅವರಿಗೆ ದಂಡನೆ ವಿಧಿಸುವ ಕುರಿತಂತೆ ಕರ್ನಾಟಕ ಲೋಕ ಸೇವಾ ಆಯೋಗದೊಂದಿಗೆ ಸಮಾಲೋಚಿಸಲಾಗುತ್ತಿದ್ದು, ಪ್ರತ್ಯೇಕವಾಗಿ ಕ್ರಮ ಕೈಗೊಳ್ಳಲಾಗುತ್ತಿದೆ.

ಶ್ರೀ ಜಯರಾಜ್, ಕಂದಾಯ ನಿರೀಕ್ಷಕರು ಅವರು ದಿ:07.12.05ರ ನೋಟೀಸಿಗೆ ಮೇಲ್(5)ರಲ್ಲಿ ಓದಲಾದ ದಿ:09.03.06ರ ಉತ್ತರ ಸಲ್ಲಿಸಿ, ಹಲವಾರು ನ್ಯಾಯಾಲಯದ ತೀರ್ಪುಗಳನ್ನು ಉಲ್ಲೇಖಿಸುತ್ತಾ ಗ್ರಾಮಸ್ಥರು ಮತ್ತು ರಾಜಮ್ಮನ ಕಡೆಯವರು ಕೇಳಿಕೊಂಡು ಮತ್ತು ವಿಶೇಷ ಜಿಲ್ಲಾಧಿಕಾರಿಗಳು ನೀಡಿದ್ದರೆನ್ನಲಾದ ಇನಾಂ ರದ್ದಿಯಾಯಿತಿ ಎಂಡಾರ್ಸ್‌ಮೆಂಟ್ ನಲ್ಲಿದ್ದ ಹೆಚ್ಚುವರಿ ಕಛೇರಿ ಮುದ್ರೆ ಮತ್ತು ಸಹಿಗಳನ್ನು ನೋಡಿ ಅದನ್ನು ನಂಬಿ ಅದು ನಿಜವಾದ ಆದೇಶವೆಂದು ಪಹಣಿ, ಮುಟೇಶನ್ ಇತ್ಯಾದಿಗಳ extractಗಳನ್ನು ಕಂದಾಯ ಬಾಕಿ ಇಲ್ಲದ ಬಗ್ಗೆ, ನೀರಿನ ಕಂದಾಯ ಬಾಕಿ ಇಲ್ಲದ ಬಗ್ಗೆ ಬರೆದು ಕೊಟ್ಟದ್ದು, ಆರ್.ಟಿ.ಸಿ.ನ್ನು ಬರೆದು ಕೊಡುವಾಗ ಅದರಲ್ಲಿ ಸದರಿ ಸ್ಪೆಷಲ್ ಡಿ.ಸಿ. ಅವರು ನೀಡಿರುವ ಇನಾಂ ರದ್ದಿಯಾಯಿತಿ ಎಂಡಾರ್ಸ್‌ಮೆಂಟ್‌ನ ಆಧಾರದ ಮೇಲೆ ನೀಡಿರುತ್ತೇವೆಂತಲೂ ಸಹ ಬರೆದುಕೊಟ್ಟಿರುವುದು ನಿಜ. ಇದು ನನಗೆ ತಿಳಿಯದ ತಪ್ಪಾಗಿದ್ದು, ಯಾವ ದುರುದ್ದೇಶದಿಂದ ನೀಡಿರುವುದಿಲ್ಲ. 1990ನೇ ಸಾಲಿನಲ್ಲಿ ಈ ಪ್ರಕರಣ ನಡೆದಿರುವುದರಿಂದ ಸದರಿ ವ್ಯಕ್ತಿಗಳು ಯಾರೆಂಬುದು ನೆನಪಿರುವುದಿಲ್ಲವಾದ್ದರಿಂದ ಅವರ ಮಾತನ್ನು ನಂಬಿ ಡಿ.ಸಿ. ಅವರು ನೀಡಿದ ಆದೇಶ ನಿಜವೆಂದು ನಂಬಿ ತಿಳಿಯದೆ ತಪ್ಪು ಮಾಡಿರುವುದನ್ನು ಕ್ಷಮಿಸಬೇಕೆಂದು ಕೋರಿ ಈಗಾಗಲೇ ಸುಮಾರು 30 ವರ್ಷಗಳ ಸುದೀರ್ಘ ಸೇವೆಯಲ್ಲಿ ಯಾವುದೇ ರೀತಿಯ ದುರ್ನಡತೆ ಎಸಗದೇ ಇರುವುದರಿಂದ ತಮ್ಮನ್ನು ಆರೋಪಮುಕ್ತರನ್ನಾಗಿಸುವಂತೆ ಕೋರಿರುತ್ತಾರೆ. ಗ್ರಾಮಸ್ಥರು ಮತ್ತು ಶ್ರೀಮತಿ ರಾಜಮ್ಮನ ಕಡೆಯವರು ಕೇಳಿಕೊಂಡ ಪ್ರಯುಕ್ತ ಮತ್ತು ವಿಶೇಷ ಜಿಲ್ಲಾಧಿಕಾರಿಗಳು ನೀಡಿದ್ದಾರೆನ್ನಲಾದ ಇನಾಂ ರದ್ದಿಯಾಯಿತಿ ಎಂಡಾರ್ಸ್‌ಮೆಂಟ್‌ನಲ್ಲಿದ್ದ ಕಛೇರಿ ಮುದ್ರೆ ಮತ್ತು ಸಹಿಗಳನ್ನು ನೋಡಿ ಅವುಗಳನ್ನು ನಂಬಿ ಅದು ನಿಜವಾದ ಆದೇಶವೆಂದು ಪಹಣೆ/ಮ್ಯುಟೇಷನ್ ಇತ್ಯಾದಿಗಳ extract ಗಳನ್ನು ಕಂದಾಯ ಬಾಕಿ ಇಲ್ಲದ ಬಗ್ಗೆ, ನೀರಿನ ಕಂದಾಯ ಬಾಕಿ ಇಲ್ಲದ ಬಗ್ಗೆ ಬರೆದುಕೊಟ್ಟಿದ್ದು, ಆರ್.ಟಿ.ಸಿ.ಯನ್ನು ಬರೆದುಕೊಡುವಾಗ ಅದರಲ್ಲಿ ಸದರಿ ಸ್ಪೆಷಲ್ ಡಿ.ಸಿ. ಅವರು ನೀಡಿರುವ ಇನಾಂ ರದ್ದಿಯಾಯಿತಿ ಎಂಡಾರ್ಸ್‌ಮೆಂಟ್‌ನ ಆಧಾರದ ಮೇಲೆ ನೀಡಿರುತ್ತೇನೆಂದು ಅವರು ಒಪ್ಪಿಕೊಂಡಿರುವ ಮೇರೆಗೆ ಇದು ಅವರಿಗೆ ತಿಳಿಯದೆ ತಪ್ಪಾಗಿರುವ ಸಂಭವವಿರಬಹುದಾದ ಹಿನ್ನೆಲೆಯಲ್ಲಿ ಅವರನ್ನು ಸೇವೆಯಿಂದ ವಜಾಗೊಳಿಸಬೇಕೆಂಬ ಉಪ ಲೋಕಾಯುಕ್ತರ ಶಿಫಾರಸ್ಸು ಆಪಾದಿತ ನೌಕರರ ದುರ್ನಡತೆಗೆ ಅಸಮ ಪ್ರಮಾಣದಲ್ಲಿರುವುದನ್ನು ಮನಗಂಡು ಉಪ ಲೋಕಾಯುಕ್ತರ ಶಿಫಾರಸ್ಸನ್ನು ಒಪ್ಪದೇ ಅವರನ್ನು ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸುವ ದಂಡನೆ ವಿಧಿಸಲು ಹಾಗೂ ಶ್ರೀ ಜಯರಾಂ, ಸಹಾಯಕ ಇಂಜಿನಿಯರ್ ಮತ್ತು ಶ್ರೀ ರಹಮತುಲ್ಲಾ, ಕಂದಾಯ ನಿರೀಕ್ಷಕರು ಅವರುಗಳಿಗೆ ಸಂಬಂಧಿಸಿದಂತೆ ವಿಚಾರಣಾ ವರದಿ ಮತ್ತು ಉಪ ಲೋಕಾಯುಕ್ತರ ಶಿಫಾರಸ್ಸನ್ನು ಒಪ್ಪಿಕೊಂಡು ಅವರುಗಳನ್ನು ಆರೋಪಮುಕ್ತರನ್ನಾಗಿಸಲು ನಿರ್ಧರಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 60 ಎಸ್‌ಇಎನ್ 92 ಬೆಂಗಳೂರು ದಿನಾಂಕ:31ನೇ ಅಕ್ಟೋಬರ್ 2006.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

i) ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(vi)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಜಯರಾಜ್, ಪ್ರಥಮ ದರ್ಜೆ ಸಹಾಯಕರು, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ (ಬಿ.ಎ.ಐ.ಸಿ.ಪಿ), ಗಾಂಧಿನಗರ, ಬೆಂಗಳೂರು ಅವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸುತ್ತದೆ.

ii) ಶ್ರೀ ಜಯರಾಂ, ಸಹಾಯಕ ಇಂಜಿನಿಯರ್ ಮತ್ತು ಶ್ರೀ ರಹಮತುಲ್ಲಾ, ಕಂದಾಯ ನಿರೀಕ್ಷಕರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಅವರುಗಳನ್ನು ಅವರುಗಳ ವಿರುದ್ಧ ಮಾಡಲಾದ ಆರೋಪಗಳಿಂದ ಆರೋಪಮುಕ್ತರನ್ನಾಗಿ ಸುತ್ತದೆ. ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 1567

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಸೇವೆಗಳು-3).